# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೨೦, ೨೦೧೪ (ಫಾಲ್ಗುಣ ೨೯, ಶಕ ವರ್ಷ ೧೯೩೫)<br>Bangalore, Thursday, March 20, 2014 (Phalguna 29, Shaka Varsha 1935) | ಸಂಚಿಕೆ ೧೨<br>Issue 12 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ) ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ಇವರ ಪರಿಷ್ಕರಣಾ ಮೇಲ್ಮನವಿಯ ಬಗ್ಗೆ.

**ಓದಲಾಗಿದೆ :**

1. ಪೊಲೀಸ್ ಅಧೀಕ್ಷಕರು ಕೋಲಾರ ಚಿನ್ನದ ಗಣಿ ರವರ ಆದೇಶ ಸಂಖ್ಯೆ: ಸಿಬ್ಬಂದಿ (2)/ಡಿಇ/02/2011, ಓಟಿ ಸಂಖ್ಯೆ: 326/2012, ದಿನಾಂಕ: 30-11-2012.
2. ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ: ಅಪೀಲು/137/ಶಿಕ್ಷೆ/2013, ಓಬಿ ಸಂಖ್ಯೆ: 50/2013-14, ದಿನಾಂಕ:24-06-2013.
3. ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ) ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ರವರ ಮೇಲ್ಮನವಿ ದಿನಾಂಕ: 27-06-2013
4. ಸರ್ಕಾರದ ಪತ್ರ ಸಂಖ್ಯೆ: ಒಇ 42 ಪೊಸಿಲಿ 2013, ದಿನಾಂಕ: 22-07-2013.
5. ಡೈರಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಪತ್ರ ಸಂಖ್ಯೆ: ಅಪೀಲು (2)23/2013-14, ದಿನಾಂಕ: 06-08-2013 ಮತ್ತು 17-10-2013.

**ಪ್ರಸ್ತಾವನೆ:**

ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ), ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ ಇವರ ವಿರುದ್ಧ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಪ್ರಕಾರ ಇಲಾಖಾ ವಿಚಾರಣೆಗೆ ಆದೇಶಿಸಲಾಗಿತ್ತು, ವಿಚಾರಣಾಧಿಕಾರಿಯವರು ಈ ಕೆಳಕಂಡ ದೋಷಾರೋಪಣಾ ಪತ್ರ ಹೊರಡಿಸಿರುತ್ತಾರೆ.

**ದೋಷರೋಪಣೆ**

ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ), ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ರವರು ಈ ಹಿಂದೆ ಜಿಲ್ಲಾ ಪೊಲೀಸ್ ಕಛೇರಿ ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಶ್ರೀ ಚಿಕ್ಕರೆಡ್ಡಪ್ಪ, ಸಿ.ಪಿ.ಸಿ-832, ವೇಮಗಲ್ ಪೊಲೀಸ್ ಠಾಣೆ ರವರು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕರಾಗಿ ಆಯ್ಕೆಯಾಗಿರುವ ಹಿನ್ನೆಲೆಯಲ್ಲಿ ಸಿ.ಪಿ.ಸಿ ಹುದ್ದೆಯಿಂದ ಬಿಡುಗಡೆಗೊಳಿಸಲು ಅರ್ಜಿದಾರರಿಂದ ಅಕ್ರಮ ಸಂಭಾವನೆಗೆ ಒತ್ತಾಯಿಸಿ ರೂ. 4,000/- ಗಳ ಲಂಚದ ಹಣವನ್ನು ಸ್ವೀಕರಿಸಿ, ಸರ್ಕಾರಿ ಕರ್ತವ್ಯ ನಿರ್ವಹಣೆಯಲ್ಲಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದಲ್ಲದೆ ಅಧಿಕಾರ ದುರ್ನಡತೆ, ಬೇಜಾವಬ್ದಾರಿತನ ಪ್ರದರ್ಶಿಸಿರುವ ಆಪಾದನೆ ಸಂಬಂಧ ವಿಚಾರಣೆ ನಡೆಸಲು ಸಿ.ಪಿ.ಐ. ಉರಿಗಾಂ ವೃತ್ತ, ಕೆ.ಜಿ.ಎಫ್ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಈ ಬಗ್ಗೆ ವಿಚಾರಣಾಧಿಕಾರಿಯವರು ವಿಚಾರಣೆ ನಡೆಸಿ ಆಪಾದಿತರ ಮೇಲಿನ ಆಪಾದನೆಗಳು ಸಾಬೀತಾಗಿರುತ್ತವೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ. ಮೇಲ್ಕಂಡ ಆರೋಪದ ಮೇಲೆ ಕಾರಣ ಕೇಳುವ ಸೂಚನಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಕೋಲಾರ ಚಿನ್ನದ ಗಣಿ ಇವರು ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಸಿಬ್ಬಂದಿ (2)/ಡಿಇ/02/2011, ಓಟಿ ಸಂಖ್ಯೆ: 326/2012, ದಿನಾಂಕ: 30-11-2012ರ ಆದೇಶದಲ್ಲಿ ಸದರಿ ಅಭಿಪ್ರಾಯವನ್ನು ಒಪ್ಪಿ

ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 07-10-2009 ರಿಂದ 08-07-2010 ರವರೆಗಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಲಾಗಿದೆ ಎಂದು ಆದೇಶಿಸಿದ್ದರು. ಈ ಆದೇಶದ ವಿರುದ್ಧ ಶ್ರೀ ನಾಗರಾಜುರವರು ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿದ್ದು ಮೇಲೆ ಓದಲಾದ (2)ರ ಆದೇಶದಲ್ಲಿ ಮೇಲ್ಮನವಿದಾರರ ಮೇಲ್ಮನವಿಯನ್ನು ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ತಿರಸ್ಕರಿಸಿದ್ದರು.

ಈ ಆದೇಶಗಳ ವಿರುದ್ಧ ಇವರು ಸರ್ಕಾರಕ್ಕೆ ಉಲ್ಲೇಖ (3)ರಲ್ಲಿರುವ ಮೇಲ್ಮನವಿಯನ್ನು ಸಲ್ಲಿಸುತ್ತಾ, ಶಿಸ್ತು ಪ್ರಾಧಿಕಾರ ತೀರ್ಮಾನಿಸಿರುವಂತೆ ಆಗಲಿ, ದೋಷಾರೋಪಣೆಯಲ್ಲಿ ದೂಷಿಸಿರುವಂತೆ ಆಗಲಿ ತಾವು ವರ್ತಿಸಿರುವುದಿಲ್ಲ ಸದರಿ ತಮ್ಮ ಮೇಲಿನ ಇಲಾಖಾ ವಿಚಾರಣೆಯಲ್ಲಿನ ಪಂಚಸಾಕ್ಷಿಯ ಹೇಳಿಕೆಗೆ ಯಾವುದೇ ಮಹತ್ವವನ್ನು ನೀಡಿರುವುದಿಲ್ಲ, ದೂರುದಾರರಾದ ಶ್ರೀ ಚಿಕ್ಕರೆಡ್ಡಪ್ಪ ರವರು ಹಣ ಬೇಡಿಕೆ ಮಾಡಿದ್ದೆ ಎಂಬ ಸಂಭಾಷಣೆಯ ಧ್ವನಿ ಮುದ್ರಣವನ್ನು ಮಾಡಿ ಲೋಕಾಯುಕ್ತ ಪೊಲೀಸ್ ಠಾಣೆಗೆ ಸಲ್ಲಿಸಿದ್ದರು ಅದರ ಆಧಾರದ ಮೇಲೆ ತಮ್ಮ ವಿರುದ್ಧ ಪ್ರಕರಣ ದಾಖಲಿಸಿಕೊಂಡು ಟ್ರ್ಯಾ ಮಾಡಲಾಗಿರುತ್ತದೆ ಮತ್ತು ಅದರಲ್ಲಿನ ಸಂಭಾಷಣೆಯನ್ನು ಚಂದ್ರಕಾಂತ್ ಎಂಬುವವರಿಗೆ ಕೇಳಿಸಿ ಅದರಲ್ಲಿರುವ ಧ್ವನಿ ನನ್ನದೆ ಎಂದು ಗುರುತು ಮಾಡಿಕೊಳ್ಳಲಾಗಿತ್ತು ಎಂಬುದು ಸುಳ್ಳಾಗಿರುತ್ತದೆ. ಟ್ರ್ಯಾಪ್ ಸಂದರ್ಭದಲ್ಲಿ ತಿಳಿಸಿರುವ ಹಣದ ಮೊತ್ತದಲ್ಲಿ ಶ್ರೀ ಚಿಕ್ಕರೆಡ್ಡಪ್ಪ ಹಾಜರುಪಡಿಸಿದ ಹಣ ರೂ. 100/-ಗಳ 8 ನೋಟುಗಳು ಅಂದರೆ ರೂ. 800/- ಆಗಿರುತ್ತದೆ. ಆದರೆ ಜಪ್ತಿಯಲ್ಲಿ ತೋರಿಸಿದ ಹಣವು ರೂ. 4000/-ಗಳು ಆಗಿರುತ್ತದೆ. ಹಾಜರುಪಡಿಸಿದ ಹಣದ ಮೊತ್ತದಲ್ಲಿಯೇ ವ್ಯತ್ಯಾಸವಿದ್ದು, ಇದು ಆರೋಪವನ್ನು ಸಂಪೂರ್ಣವಾಗಿ ಸುಳ್ಳು ಮಾಡಿರುತ್ತದೆ. ದೂರುದಾರರು ತಮ್ಮ ಬಗ್ಗೆ ವೈಷಮ್ಯ ಹೊಂದಿದ್ದು, ಅದರ ದ್ವೇಷ ಸಾಧನೆಗಾಗಿ ಕಾಯುತ್ತಿದ್ದು, ಅವರು ಬಿಡುಗಡೆ ಮಾಡುವ ಸಂದರ್ಭವನ್ನು ಬಳಸಿಕೊಂಡು ಲೋಕಾಯುಕ್ತ ಟ್ರ್ಯಾಪ್ ಕಾರ್ಯಾಚರಣೆಗೆ ಕಾರಣರಾಗಿರುತ್ತಾರೆ. ತಾವು ಹಣ ಕೇಳದಿದ್ದರೂ ತಮ್ಮ ಜೇಬಿಗೆ ಬಲವಂತವಾಗಿ ತುರುಕಿ ತನಿಖಾಧಿಕಾರಿಯವರನ್ನು ಕರೆತಂದು ಈ ಎಲ್ಲಾ ಬೆಳವಣಿಗೆಳಿಗೆ ಕಾರಣರಾಗಿರುತ್ತಾರೆ. ಆದುದರಿಂದ ಶಿಸ್ತು ಪ್ರಾಧಿಕಾರ ಮತ್ತು ಮೇಲ್ಮನವಿ ಪ್ರಾಧಿಕಾರ ಹೊರಡಿಸಿದ ಆದೇಶವನ್ನು ರದ್ದುಪಡಿಸಿ ತಮ್ಮನ್ನು ಸೇವೆಯಲ್ಲಿ ಪುನರ್ ನೇಮಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರದ ಪತ್ರದಲ್ಲಿ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣಾ ದಾಖಲಾತಿಗಳು ಮತ್ತು ಖಂಡಿಕಾವಾರು ಷರಾವನ್ನು ಒದಗಿಸುವಂತೆ ಡಿಜಿ ಮತ್ತು ಐಜಿಪಿರವರನ್ನು ಕೋರಲಾಗಿತ್ತು. ಡಿಜಿ ಮತ್ತು ಐಜಿಪಿ ರವರು ಈ ಬಗ್ಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ), ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ರವರ ಪರಿಷ್ಕರಣಾ ಮೇಲ್ಮನವಿ ಅರ್ಜಿಯ ಬಗ್ಗೆ ಖಂಡಿಕಾವಾರು ಷರಾ ಮತ್ತು ಇಲಾಖಾ ವಿಚಾರಣಾ ದಾಖಲಾತಿಗಳನ್ನು ಒದಗಿಸಿ ಇಲಾಖಾ ವಿಚಾರಣೆಯಲ್ಲಿ ಅಭಿಯೋಗ ಸಾಕ್ಷಿಗಳ ಹೇಳಿಕೆ ಮತ್ತು ಪೂರಕ ದಾಖಲಾತಿಗಳಿಂದ ಹಾಗೂ ಇಲಾಖಾ ವಿಚಾರಣಾಧಿಕಾರಿಗಳ ಅಂತಿಮ ವರದಿಯಿಂದ ಸದರಿಯವರ ವಿರುದ್ಧದ ಆರೋಪವು ದೃಢಪಟ್ಟಿರುವುದರಿಂದ, ಸದರಿಯವರಿಗೆ ವಿಧಿಸಿರುವ ಶಿಕ್ಷೆಯು ಸಮಂಜಸವಾಗಿರುವುದರಿಂದ, ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸುವಂತೆ ಮೇಲೆ ಓದಲಾದ (5)ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದರು.

ಡಿಜಿ ಮತ್ತು ಐಜಿಪಿ ರವರು ತಮ್ಮ ಪತ್ರ ದಿನಾಂಕ:06-08-2013 ರಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕಂಡಿಕಾವಾರು ಷರಾವನ್ನು ಸಲ್ಲಿಸಿದ್ದು, ಸದರಿ ಷರಾದಲ್ಲಿ ಪ್ರಕರಣದ ಆರೋಪಿತರಾದ ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ), ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ಇವರು ಲಂಚ ಪ್ರಕರಣದಲ್ಲಿ ಲೋಕಾಯುಕ್ತರ ಬಲೆಗೆ ಬಿದ್ದಿದ್ದು, ಇವರ ವಿರುದ್ಧ ಕ್ರಿಮಿನಲ್ ಮೊ.ಸಂಖ್ಯೆ:ಸಿಸಿ ನಂ.1/2011ರಲ್ಲಿ ನ್ಯಾಯಾಲಯವು ಸದರಿಯವರನ್ನು ತಪ್ಪಿತಸ್ಥನೆಂದು ತೀರ್ಮಾನಿಸಿ, ಲಂಚ ನಿರೋಧ ಕಾಯ್ದೆ 1988ರ ಕಲಂ 7ರಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ, 2 ವರ್ಷಗಳ ಕಠಿಣ ಸಜೆ ಮತ್ತು ರೂ. 5,000/-ಗಳ ದಂಡವನ್ನು ವಿಧಿಸಿದ್ದು, ದಂಡವನ್ನು ಪಾವತಿಸಲು ವಿಫಲರಾದಲ್ಲಿ, 3 ತಿಂಗಳ ಸದಾ ಸಜೆಯನ್ನು ಅನುಭವಿಸತಕ್ಕದ್ದೆಂದು ಹಾಗೂ ಲಂಚ ನಿರೋಧ ಕಾಯ್ಕೆ 1988ರ ಕಲಂ 13(1)ಡಿ ಸಹವಾಚನ 13(2)ರಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ, 2 ವರ್ಷಗಳ ಕಠಿಣ ಸಜೆ ಮತ್ತು ರೂ. 5,000/-ಗಳ ದಂಡವನ್ನು ವಿಧಿಸಿದ್ದು, ದಂಡವನ್ನು ಪಾವತಿಸಲು ವಿಫಲರಾದಲ್ಲಿ, 3 ತಿಂಗಳ ಸಜೆಯನ್ನು ಅನುಭವಿಸತಕ್ಕದ್ದೆಂದು ದಿನಾಂಕ: 26-07-2012 ರಂದು ನೀಡಿದ ತೀರ್ಪಿನಲ್ಲಿ ಆದೇಶಿಸಿರುತ್ತದೆ. ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳು ಆರೋಪಿತ ಸರ್ಕಾರಿ ನೌಕರರಾದ ಶ್ರೀ ನಾಗರಾಜ, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಪೊಲೀಸ್ ಕಛೇರಿ, ಕೆಜಿಎಫ್ ರವರು ಲಂಚದ ಹಣವನ್ನು ಪಡೆದಿರುತ್ತಾರೆಂಬ ಆರೋಪವು ಸಾಬೀತಾಗಿರುತ್ತದೆಂದು ವರದಿ ನೀಡಿದ್ದುದರ ಮೇರೆಗೆ ಶಿಸ್ತು ಪ್ರಾಧಿಕಾರಿಗಳು ಇವರನ್ನು ಸೇವೆಯಿಂದ ವಜಾಗೊಳಿಸಿರುವುದಾಗಿ ಡಿಜಿ ಮತ್ತು ಐಜಿಪಿ ರವರು ವರದಿ ಮಾಡಿರುತ್ತಾರೆ. ಅಪಾದಿತರ ಮೇಲ್ಮನವಿಯಲ್ಲಿ ಪರಿಗಣಿಸಿಬಹುದಾದ ಯಾವುದೇ ಅಂಶಗಳು ಇಲ್ಲದೆ ಇರುವುದರಿಂದ ಮತ್ತು ಇವರು ಫಿರ್ಯಾದುದಾರರಿಂದ ಲಂಚದ ಹಣ ಪಡೆದಿರುವ ಆರೋಪವು ಸಾಬೀತಾಗಿರುವುದಾಗಿ ಇಲಾಖಾ ವಿಚಾರಣಾಧಿಕಾರಿಗಳು ವರದಿ ನೀಡಿರುವ ಹಿನ್ನಲೆಯಲ್ಲಿ ಈ ದಂಡನೆಯು ಇವರು ಎಸಗಿರುವ ದುರ್ನಡತೆಗೆ ಅನುಗುಣವಾಗಿದ್ದು, ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 42 ಪೊಸಿಲಿ 2013 ಬೆಂಗಳೂರು, ದಿನಾಂಕ: 16-01-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಆರ್. ನಾಗರಾಜ, ದ್ವಿತೀಯ ದರ್ಜೆ ಸಹಾಯಕ (ಮಾಜಿ), ಜಿಲ್ಲಾ ಪೊಲೀಸ್ ಕಛೇರಿ, ಕೆ.ಜಿ.ಎಫ್ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

P.R. 86

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಡಿ. ಚಿಕ್ಕಹನುಮಂತಯ್ಯ, ಪಿ.ಎಸ್.ಐ., (ನಿವೃತ್ತ) ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :**

1. ಕರ್ನಾಟಕ ಲೋಕಾಯುಕ್ತ ಕಛೇರಿಯ ಅರೆ ಸರ್ಕಾರಿ ಪತ್ರ ಸಂಖ್ಯೆ: Compt/uplok/BCD.507/ARE-10, ದಿನಾಂಕ: 14-07-2011.
2. ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ರವರ ಆದೇಶ ಸಂಖ್ಯೆ: 31/ಡಿಇ–1/ಆರ್–6/2008, ದಿನಾಂಕ: 21–12–2011.
3. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಅಪೀಲು(1)37/2012–13, ದಿನಾಂಕ: 11–12–2012.
4. 2ನೇ ಕಾರಣ ಕೇಳುವ ನೋಟೀಸ್ ದಿನಾಂಕ: 01–06–2013.
5. ಶ್ರೀ ಹೆಚ್.ಡಿ. ಚಿಕ್ಕಹನುಮಂತಯ್ಯ, ಪಿ.ಎಸ್.ಐ., (ನಿವೃತ್ತ), ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಸಮಜಾಯಿಷಿ ದಿನಾಂಕ: 05–09–2013
6. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: PSC 172 CNS 2013 ದಿನಾಂಕ: 02–01–2014.

**ಪ್ರಸ್ತಾವನೆ :**

ಶ್ರೀ ಹೆಚ್.ಡಿ. ಚಿಕ್ಕಹನುಮಂತಯ್ಯ, ಪಿ.ಎಸ್.ಐ., (ನಿವೃತ್ತ), ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು 2008ನೇ ಸಾಲಿನಲ್ಲಿ ಬೆಂಗಳೂರು ನಗರದ ಶೇಷಾದ್ರಿಪುರಂ ಪೊಲೀಸ್ ಠಾಣೆಯಲ್ಲಿ ಅಪರಾಧ ವಿಭಾಗದ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ನಗರ ವಿಭಾಗದ ಮೊಕದ್ದಮೆ ಸಂಖ್ಯೆ:37/08 ಕಲಂ 7, 13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ 1988 ರಡಿಯಲ್ಲಿ ಪ್ರಕರಣ ದಾಖಲಿಸಿ ತನಿಖೆಯನ್ನು ನಡೆಸಿರುತ್ತಾರೆ. ತದನಂತರ ಮಾನ್ಯ ಉಪಲೋಕಾಯುಕ್ತರವರು ಕರ್ನಾಟಕ ಲೋಕಾಯುಕ್ತ ಅಧಿನಿಯಮದ ಕಲಂ 12(3)ರಡಿಯಲ್ಲಿ ಸರ್ಕಾರಕ್ಕೆ ವರದಿಯನ್ನು ಕಳುಹಿಸಿ ದಾಖಲೆಗಳಿಂದ ಸದರಿ ಅಧಿಕಾರಿಯು ದುರ್ನಡತೆವೆಸಗಿರುವುದು ಕಂಡು ಬಂದಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಲು ಕೋರಿ ವರದಿ ಸಲ್ಲಿಸಿರುತ್ತಾರೆ. ಉಲ್ಲೇಖಿತ (2)ರ ಆದೇಶದಲ್ಲಿ ಶ್ರೀ ಹೆಚ್.ಡಿ. ಚಿಕ್ಕಹನುಮಂತಯ್ಯ ರವರ ವಿರುದ್ಧ ಇಲಾಖಾ ವಿಚಾರಣೆಗೆ ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ರವರು ಆದೇಶಿರುತ್ತಾರೆ. ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯಲ್ಲಿ ಸಾಕ್ಷಿಗಳು ಮತ್ತು ಸಾಕ್ಷ್ಯಾಧಾರಗಳಿಂದ ಆರೋಪಿತ ಪೊಲೀಸ್ ಅಧಿಕಾರಿಯವರು ಪಿರ್ಯಾಧಿ ಶ್ರೀ ನರಸಿಂಹ ಎಂಬುವವರ ಮಗನನ್ನು ಅಕ್ರಮವಾಗಿ ವಶದಲ್ಲಿರಿಸಿಕೊಂಡು ರೂ. 15,000/– ಗಳ ಲಂಚದ ಹಣಕ್ಕೆ ಒತ್ತಾಯಿಸಿ ರೂ. 11,000/– ಗಳಿಗೆ ಒಪ್ಪಿ ನಂತರ ಬಾಕಿಯಿದ್ದ ರೂ. 3000/– ಗಳ ಹಣಕ್ಕೆ ಪದೇ ಪದೇ ಒತ್ತಾಯಿಸಿ ದಿನಾಂಕ: 10–07–2008 ರಂದು ಫಿರ್ಯಾದುದಾರರಿಂದ ರೂ. 3000/– ಗಳ ಲಂಚದ ಹಣವನ್ನು ಒತ್ತಾಯ ಪೂರ್ವಕವಾಗಿ ಪಡೆದು ಲೋಕಾಯುಕ್ತ ಪೊಲೀಸರ ಬಲೆಗೆ ಬಿದ್ದಿರುವ ಆರೋಪವು ಸಾಬೀತಾಗಿರುತ್ತದೆಂದು ವರದಿ ಮಾಡಿದ್ದು, ಈ ಪ್ರಕರಣದಲ್ಲಿ ಭಾಗಿಯಾದ ಶ್ರೀ ಹೆಚ್.ಡಿ. ಚಿಕ್ಕಹನುಮಂತಯ್ಯ, ಪಿ.ಎಸ್.ಐ ರವರು ದಿನಾಂಕ: 31–10–2012 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ ಎಂದು ತಿಳಿಸುತ್ತಾ, ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ನಿಯಮಗಳ ನಿಯಮ 214(2)(ಎ) ಪ್ರಕಾರ ನಿವೃತ್ತ ಆ.ಪೋ.ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಸರ್ಕಾರವೇ ಅಂತಿಮ ಆದೇಶ ಹೊರಡಿಸಬೇಕಾಗಿರುತ್ತದೆ ಎಂದು ಮೇಲೆ ಓದಲಾದ (3)ರ ಪತ್ರದಲ್ಲಿ ಡಿ.ಜಿ ಮತ್ತು ಐ.ಜಿ.ಪಿ ರವರು ಕೋರಿರುತ್ತಾರೆ.

ಡಿಜಿ ಮತ್ತು ಐಜಿಪಿ ರವರ ಪ್ರಸ್ತಾವನೆ ಹಾಗೂ ಇಲಾಖಾ ವಿಚಾರಣೆ ದಾಖಲಾತಿಗಳನ್ನು ಪರಿಶೀಲಿಸಿ ನಿಯಮಾನುಸಾರ ದಂಡನೆಯನ್ನು ವಿಧಿಸುವ ಬಗ್ಗೆ ಆರೋಪಿತರಿಗೆ ಮೇಲೆ ಓದಲಾದ (4) ರಲ್ಲಿ ಕಾರಣ ಕೇಳುವ ನೋಟೀಸನ್ನು ಡಿಜಿ ಮತ್ತು ಐಜಿಪಿ ರವರ ಮುಖಾಂತರ ಜಾರಿ ಮಾಡಲಾಗಿರುತ್ತದೆ. ಆರೋಪಿತರು ಮೇಲೆ ಓದಲಾದ (5) ರಲ್ಲಿ ತಮ್ಮ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಇವರ ಸಮಜಾಯಿಷಿಯಲ್ಲಿ ಪರಿಗಣಿಸಬಹುದಾದ ಅಂಶಗಳು ಇಲ್ಲದೇ ಇರುವುದರಿಂದ ಆರೋಪಿತರು ಈಗಾಗಲೇ ಸೇವೆಯಿಂದ ನಿವೃತ್ತರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು 214(1)(ಎ) ರನ್ವಯ ಇವರ ಪಿಂಚಣಿಯಲ್ಲಿ ಪ್ರತಿ ತಿಂಗಳು ರೂ. 300/– ಗಳನ್ನು ಒಂದು ವರ್ಷದ ಅವಧಿಯವರೆಗೆ ಕಟಾವುಗೊಳಿಸುವ ದಂಡನೆಯನ್ನು ವಿಧಿಸಲು ನಿರ್ಣಯಿಸಿ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (6)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರನ್ವಯ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 128 ಪೊಸಇ 2013 ಬೆಂಗಳೂರು, ದಿನಾಂಕ: 10–01–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಡಿ. ಚಿಕ್ಕಹನುಮಂತಯ್ಯ, ಪಿ.ಎಸ್.ಐ., (ನಿವೃತ್ತ), ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಪಿಂಚಣಿಯಲ್ಲಿ ಮಾಹೆಯಾನ ರೂ. 300/– ಗಳನ್ನು ಒಂದು ವರ್ಷದ ಅವಧಿಗೆ ತಡೆಹಿಡಿಯುವ ದಂಡನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**P.R. 90**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ನಂಜುಂಡೇಗೌಡ, ಪಿ.ಎಸ್.ಐ, ಹಾಸನ ಜಿಲ್ಲೆ ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಒಇ 158 ಪೊಸಇ 2012, ದಿನಾಂಕ: 26–09–2012.
2. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬ್ಬಂದಿ–1/09/2013–14 ದಿನಾಂಕ: 07–06–2013.

**ಪ್ರಸ್ತಾವನೆ :**

ಶ್ರೀ ನಂಜುಂಡೇಗೌಡ, ಪಿಎಸ್ಐ ಹುದ್ದೆಯಲ್ಲಿ ದಿನಾಂಕ:15-12-2003 ರಂದು ನೇಮಕಾತಿ ಹೊಂದಿದ್ದು, ಸದರಿಯವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ: 14-06-2006ಕ್ಕೆ ಪೂರ್ಣಗೊಳ್ಳುತ್ತಿದ್ದು ಹಾಗೂ ಸದರಿಯವರು ಹುದ್ದೆಗೆ ಸಂಬಂಧಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದರೂ ಸಹ ಇವರ ವಿರುದ್ಧ ಚಾಲ್ತಿ ಶಿಕ್ಷೆ ಇದ್ದುದರಿಂದ, ನೇಮಕಾತಿ ಪ್ರಾಧಿಕಾರವು ಕೆ.ಸಿ.ಎಸ್. (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 4(1)(ii) ರನ್ವಯ ಸದರಿಯವರ ಖಾಯಂಪೂರ್ವ ಅವಧಿಯನ್ನು ಒಂದು ವರ್ಷ ಮೂರು ತಿಂಗಳ ಕಾಲ ಮತ್ತು ದಿನಾಂಕ:15-09-2007 ರಿಂದ 01-06-2011 ಉಲ್ಲೇಖಿತ (1)ರ ಸರ್ಕಾರದ ಆದೇಶದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿಕೆ ಮೇರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಸದರಿ ಪಿಎಸ್ಐ ರವರ ವಿರುದ್ಧ ಎಸ್‌ಪಿ, ಹಾಸನರವರು ಶಿಕ್ಷಾ ಆದೇಶ ಸಂಖ್ಯೆ: ಸಿಬ್ಬಂದಿ-1/ಪಿಆರ್/16/2011-12, ದಿನಾಂಕ: 29/06/2011 ರಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಪಡೆಯುವ ವೇತನ ಬಡ್ತಿಗಳಿಗೆ ಭಾದಕವಾಗದಂತೆ 06 ತಿಂಗಳ ಕಾಲ ಮುಂದೂಡಿರುವುದರಿಂದ, ಇವರ ಪರಿಕ್ಷಾರ್ಥ ಅವಧಿಯನ್ನು ದಿನಾಂಕ: 02-06-2011 ರಿಂದ 29-12-2011 ರವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 357 ಪೊಸಇ 2013 ಬೆಂಗಳೂರು, ದಿನಾಂಕ: 08-01-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ಶ್ರೀ ನಂಜುಂಡೇಗೌಡ, ಪಿಎಸ್ಐ, ಹಾಸನ ಜಿಲ್ಲೆ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 02-06-2011 ರಿಂದ ದಿನಾಂಕ: 29-12-2011 ರವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

P.R. 91

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎನ್.ರಾಜಣ್ಣ, ಪ್ರೊ.ಪಿ.ಎಸ್.ಐ., ಡಿಎಸ್ಎ ಘಟಕ, ಬೆಂಗಳೂರು ಜಿಲ್ಲೆ ಇವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬ್ಬಂದಿ-1/63/2012-13 ದಿನಾಂಕ: 28-03-2013 ಮತ್ತು 05-10-2013.

**ಪ್ರಸ್ತಾವನೆ :**

ಶ್ರೀ ಎನ್. ರಾಜಣ್ಣ ಪ್ರೊ.ಪಿ.ಎಸ್.ಐ., ಡಿಎಸ್ಎ ಘಟಕ, ಬೆಂಗಳೂರು ಜಿಲ್ಲೆ ರವರು ಸೇವಾ ನಿರತ ಅಭ್ಯರ್ಥಿಗಳಿಗಾಗಿ ನಿಗದಿಪಡಿಸಲಾದ ಪಿ.ಎಸ್.ಐ. ಹುದ್ದೆಯಲ್ಲಿ ದಿನಾಂಕ: 15-12-2003 ರಂದು ನೇಮಕಾತಿ ಹೊಂದಿದ್ದು, ಸದರಿಯವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ: 14-06-2006ಕ್ಕೆ ಪೂರ್ಣಗೊಳ್ಳುತ್ತದೆ. ಸದರಿಯವರು ಹುದ್ದೆಗೆ ಸಂಬಂಧಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದರೂ ಸಹ ಸದರಿಯವರ ವಿರುದ್ಧ ಚಾಲ್ತಿ ಶಿಕ್ಷೆ ಇದ್ದುದರಿಂದ, ನೇಮಕಾತಿ ಪ್ರಾಧಿಕಾರವು ಕೆ.ಸಿ.ಎಸ್. (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 4(1)(ii) ರನ್ವಯ ಖಾಯಂಪೂರ್ವ ಅವಧಿಯನ್ನು ದಿನಾಂಕ: 15-06-2006 ರಿಂದ 14-09-2007 ರವರೆಗೆ 1 ವರ್ಷ 3 ತಿಂಗಳ ಅವಧಿಗೆ ವಿಸ್ತರಿಸಿರುತ್ತದೆ.

ಸದರಿಯವರ ವಿರುದ್ಧದ ಶಿಸ್ತಿನ ಪ್ರಕರಣಕ್ಕೆ ಸಂಬಂಧಿಸಿದಂತೆ ದಿನಾಂಕ: 05-07-2012ರ ಆದೇಶದಲ್ಲಿ ದೋಷಮುಕ್ತಗೊಳಿಸಲಾಗಿದ್ದು ಹಾಗೂ ಕೆ.ಸಿಎಸ್. (ಪ್ರೊಬೇಷನ್) ನಿಯಮಗಳು 1977ರ ನಿಯಮ 4 ಮತ್ತು 5 (1) ರನ್ವಯ ಸದರಿಯವರು ಹೊಂದಿರುವ ಹುದ್ದೆಯ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಿರುತ್ತಾರೆ. ಆದ್ದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ: 15-09-2007 ರಿಂದ 15-01-2011 ರವರೆಗೆ ಕೆ.ಸಿಎಸ್. (ಪ್ರೊಬೇಷನ್)ನಿಯಮಗಳು, 1977ರ ನಿಯಮ 4(1)(ii) ರನ್ವಯ ವಿಸ್ತಿರಿಸುವಂತೆ ಮೇಲೆ ಓದಲಾದ (1)ರ ಪತ್ರಗಳಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 131 ಪೊಸಇ 2013 ಬೆಂಗಳೂರು, ದಿನಾಂಕ: 03-01-2014**

ಪ್ರಸ್ತಾವನೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ(ಪರವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ಶ್ರೀ ಎನ್.ರಾಜಣ್ಣ ಪ್ರೊ.ಪಿ.ಎಸ್.ಐ., ಡಿಎಸ್ಎ ಘಟಕ, ಬೆಂಗಳೂರು ಜಿಲ್ಲೆ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 15-09-2007 ರಿಂದ 15-01-2011 ರವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

P.R. 92

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ. ವಿ. ಮುನಿರೆಡ್ಡಿ, ಪಿಎಸ್ಐ, ಬಾಗೇಪಲ್ಲಿ ಪೊಲೀಸ್ ಠಾಣೆ, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಆದೇಶ ಸಂಖ್ಯೆ: ಪನ್ನಿ/ಸಿಎಂ/20/2012–13 ದಿನಾಂಕ: 17.11.2013

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/145/ಶಿಕ್ಷೆ/2013 (ಓ.ಬಿ. ಸಂಖ್ಯೆ:08/2013–14) ದಿನಾಂಕ:16.04.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26.08.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)43/2013.14 ದಿನಾಂಕ: 16.11.2013

**ಪ್ರಸ್ತಾವನೆ:**

ಶ್ರೀ ವಿ. ಮುನಿರೆಡ್ಡಿ, ಪಿಎಸ್ಐ, ಇವರು ಬಾಗೇಪಲ್ಲಿ ಪೊಲೀಸ್ ಠಾಣೆ, ಚಿಕ್ಕಬಳ್ಳಾಪುರ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿ ತೋರಿದ ಕಾರಣ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಕರ್ತವ್ಯದಲ್ಲಿ ಕರ್ತವ್ಯಲೋಪವೆಸಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ವ್ಯಕ್ತಪಡಿಸಿರುವ ಬಗ್ಗೆ".

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಬಳ್ಳಾಪುರ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17.11.2013ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು (1) ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 16.04.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಮತ್ತು ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 118 ಪೊಸಿಅ 2013 ಬೆಂಗಳೂರು, ದಿನಾಂಕ: 06.01.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿ ಮುನಿರೆಡ್ಡಿ, ಪಿಎಸ್ಐ, ಬಾಗೇಪಲ್ಲಿ ಪೊಲೀಸ್ ಠಾಣೆ, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

P.R. 93

SC - 30

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಪಿ ಗುರುಮೂರ್ತಿ, ಮಾಜಿ ಪಿಸಿ–397, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: 03/ಡಿಇ/ಆರ್–6/2008–09 ದಿನಾಂಕ: 19.12.2008
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/23/2008–09 ದಿನಾಂಕ: ––.06.2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18.07.2013.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)28/2013–14 ದಿನಾಂಕ:23.10.2013 ಮತ್ತು 26.11.2013

**ಪ್ರಸ್ತಾವನೆ:**

ಶ್ರೀ ಪಿ ಗುರುಮೂರ್ತಿ, ಮಾಜಿ ಪಿಸಿ–397, ಇವರು 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯಕ್ಕೆ ಗೈರುಹಾಜರಾಗಿ, ಕರ್ತವ್ಯ ನಿರ್ಲಕ್ಷ್ಯತನ, ಅಶಿಸ್ತು ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1665ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಪಿ. ಗುರುಮೂರ್ತಿ, ಪೇದೆ–397, ಇ.ದಳ, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಆದ ನಿಮ್ಮನ್ನು ದಿನಾಂಕ: 01.07.2008 ರಂದು ರಾತ್ರಿ ನಗರ ಕರ್ತವ್ಯಕ್ಕೆ ತೆರಳಲು ತುಕಡಿ ನಾಯಕರಾದ, ಶ್ರೀ ವಿ. ರಾಮಮೂರ್ತಿ, ಹೆಚ್.ಸಿ.18, ಇ.ದಳ ರವರ ತುಕಡಿಗೆ ನೇಮಕ ಮಾಡಲಾಗಿತ್ತು. ನೀವು ಸದರಿ ತುಕಡಿಯೊಂದಿಗೆ ರಾತ್ರಿ ನಗರ ಕರ್ತವ್ಯಕ್ಕೆ ತೆರಳದೆ, ಅನಧಿಕೃತವಾಗಿ ಗೈರು ಹಾಜರಾಗಿ, ಕರ್ತವ್ಯ ನಿರ್ಲಕ್ಷತೆ ಹಾಗೂ ಬೇಜಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ.

ನಿಮಗೆ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ, ಕರ್ತವ್ಯ ಪರಿತ್ಯಾಗ ಎಚ್ಚರಿಕೆ ನೋಟೀಸ್ ಸಂಖ್ಯೆ:76/ಡಿಇ/ಡಿಎನ್/2008–09 ದಿನಾಂಕ: 29.07.2008 ನ್ನು ಹೊರಡಿಸಲಾಗಿದ್ದು, ನೀವು ಸದರಿ ನೋಟೀಸ್ ಅನ್ನು ದಿನಾಂಕ: 31.07.2008 ರಂದು ಸ್ವೀಕರಿಸಿಯೂ ಸಹ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ, ಕರ್ತವ್ಯಕ್ಕೆ ಗೈರು ಹಾಜರಿಯಲ್ಲಿ ಮುಂದುವರಿದು ಅವಿಧೇಯತೆ, ಕರ್ತವ್ಯ ನಿರ್ಲಕ್ಷತೆ, ಅಶಿಸ್ತು ಹಾಗೂ ಬೇಜಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:19.12.2008ರ ಆದೇಶದಲ್ಲಿ ಅರ್ಜಿದಾರರು ದಿನಾಂಕ: 01.07.2008ರಿಂದ 07.12.2008ರವರೆಗೆ ಒಟ್ಟು 160 ದಿನಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿ, ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 95ರ ಉಪನಿಯಮ 3(1)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: ––.06.2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ನಿರ್ಲಕ್ಷ್ಯತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 93 ಪೊಸಿಅ 2013, ಬೆಂಗಳೂರು, ದಿನಾಂಕ: 06–01–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ. ಗುರುಮೂರ್ತಿ, ಮಾಜಿ ಪಿಸಿ–397, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

P.R. 94

SC - 30

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ. ಕೆ.ಎನ್. ಗುರುಬಸವ, ಹೆಚ್.ಸಿ–60, ಪಾಂಡವಪುರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)/ಪಿಆರ್/21/2012–13 (ಓ.ಬಿ.ಸಂಖ್ಯೆ:255/12–13) ದಿನಾಂಕ: 17.12.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/73/2012–13 (ಓ.ಬಿ.ಸಂಖ್ಯೆ:16/2013–14) ದಿನಾಂಕ: 24.05.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19.07.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)34/2013.14 ದಿನಾಂಕ: 06.09.2013, 21.11.2013

**ಪ್ರಸ್ತಾವನೆ:**

ಶ್ರೀ ಕೆ.ಎನ್ ಗುರುಬಸವ. ಹೆಚ್.ಸಿ–60, ಪಾಂಡವಪುರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ನಾಗಮಂಗಲ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ತೀವ್ರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ಗುರುಬಸವ, ಸಿಹೆಚ್.ಸಿ.–260, ನಾಗಮಂಗಲ (ಗ್ರಾ) ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮನ್ನು ದಿನಾಂಕ: 10–03–2012ರಂದು ಬೆಳ್ಳೂರು ಚೆಕ್‌ಪೋಸ್ಟ್ ಕರ್ತವ್ಯಕ್ಕೆ ನೇಮಕ ಮಾಡಲಾಗಿರುತ್ತದೆ. ಆ ಸಮಯದಲ್ಲಿ ನಿಮಗೆ ದರೋಡೆ ಮತ್ತು ಸುಲಿಗೆ ಪ್ರಕರಣಗಳು ಜರುಗದಂತೆ ಕ್ರಮ ಕೈಗೊಳ್ಳುವಂತೆ ಸೂಕ್ತ ಸಲಹೆ ಹಾಗೂ ಸೂಚನೆಗಳನ್ನು ಸಹ ನೀಡಿದ್ದರೂ ನೀವು ದರೋಡೆ, ಸುಲಿಗೆ ಪ್ರಕರಣಗಳನ್ನು ತಡೆಗಟ್ಟಲು ವಿಫಲರಾಗಿರುತ್ತೀರಿ. ನೀವು ಚೆಕ್‌ಪೋಸ್ಟ್ ಕರ್ತವ್ಯದಲ್ಲಿದ್ದು, ವಾಹನಗಳ ತಪಾಸಣೆಯನ್ನು ಪ್ರಮಾಣಿಕವಾಗಿ ನಿರ್ವಹಿಸದ ಕಾರಣದಿಂದಾಗಿ ಆ ದಿನ ಸುಲಿಗೆ ಪ್ರಕರಣ ಜರುಗಿದ್ದು, ಬೆಳ್ಳೂರು ಪೊಲೀಸ್ ಠಾಣೆ ಮೊ.ಸಂ. 42/2012 ಕಲಂ 395 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. ಹೀಗೆ ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು, ಬೆಳ್ಳೂರು ಠಾಣೆಯ ವ್ಯಾಪ್ತಿಯಲ್ಲಿ ದರೋಡೆ/ಸುಲಿಗೆ ಪ್ರಕರಣಗಳು ಜರುಗುತ್ತಿದ್ದರೂ ಸಹಾ ನೀವು ಚೆಕ್‌ಪೋಸ್ಟ್ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲ. ನೀವು ಸೂಕ್ತ ಮುನ್ನೆಚ್ಚರಿಕೆ/ಮುಂಜಾಗರೂಕತೆಯ ಕ್ರಮವಾಗಿ ಭದ್ರತಾ ಕಾಯ್ದೆಯ ಅನ್ವಯ ಕ್ರಮ ಕೈಗೊಂಡು, ಎಂ.ಓ.ಬಿ. ಆಸಾಮಿಗಳ ಚಲನೆಯ ಮೇಲೆ ನಿಗಾ ವಹಿಸಿ ಚೆಕ್‌ಪೋಸ್ಟ್‌ನಲ್ಲಿ ತಪಾಸಣೆ ಮಾಡಿ ಮೇಲ್ವಿಚಾರಣೆ ಮಾಡಿದ್ದಲ್ಲಿ ಇಂತಹ ದರೋಡೆ ಹಾಗೂ ಸುಲಿಗೆಯಂತಹ ಘೋರ ಪ್ರಕರಣ ದಾಖಲಾಗುತ್ತಿರಲಿಲ್ಲ. ಈ ರೀತಿ ಕ್ರಮ ಜರುಗಿಸದೆ ಅಪರಾಧಗಳನ್ನು ತಡೆಗಟ್ಟುವಲ್ಲಿ ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿ ತೋರಿರುತ್ತೀರೆಂದು ಆರೋಪ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 17–12–2012ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 06 ತಿಂಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಿ, ಇವರು ಅಮಾನತ್ತಿನಲ್ಲಿದ್ದ ಅವಧಿ ದಿನಾಂಕ: 12–03–2012ರಿಂದ 18–04–2012ರವರೆಗೆ ಒಟ್ಟು 38 ದಿನಗಳನ್ನು ಅಮಾನತ್ತೆಂದು ಪರಿಗಣಿಸಿ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24–05–2013 ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಆ.ಪೊ.ಅ.ರವರಿಗೆ "ವಾಗ್ದಂಡನೆ" (censure) ವಿಧಿಸಿ ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 102 ಪೊಸಿಅ 2013, ಬೆಂಗಳೂರು, ದಿನಾಂಕ: 06–01–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎನ್. ಗುರುಬಸವ, ಹೆಚ್.ಸಿ.–60, ಪಾಂಡವಪುರ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

P.R. 95

SC - 30

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ. ಕೆ.ಎನ್. ರವೀಶ್, ಪಿಎಸ್‌ಐ, ಚೆನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಹಾಲಿ ಚಿಕ್ಕಜಾಜೂರು ಪೊಲೀಸ್ ಠಾಣೆ ಚಿತ್ರದುರ್ಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಪಿಆರ್/134/2011, (ಓ.ಬಿ.ಸಂಖ್ಯೆ: 648/2012) ದಿನಾಂಕ: 24–03–2012)
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 60/ಅಪೀಲು/ಸಿಬ್ಬಂದಿ–2/2012–13 (ಓ.ಬಿ.ಸಂಖ್ಯೆ:68/12–13) ದಿನಾಂಕ: 26–07–2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28–09–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 35/2012–13 ದಿನಾಂಕ: 23–07–2013
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 158 ಸಿಎನ್‌ಎಸ್ 2013 ದಿನಾಂಕ: 16–12–2013

**ಪ್ರಸ್ತಾವನೆ:**

ಶ್ರೀ ಕೆ.ಎನ್ ರವೀಶ್, ಪಿಎಸ್‌ಐ, ಚಿಕ್ಕಜಾಜೂರು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಚೆನ್ನಗಿರಿ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ಅಶಿಸ್ತು, ದುರ್ನಡತೆ ಮತ್ತು ಘೋರ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಕೆ.ಎನ್. ರವೀಶ್, ಪಿಎಸ್‌ಐ, ಆದ ನೀವು ಚನ್ನಗಿರಿ ಪೊಲೀಸ್ ಠಾಣೆಯ ಕಾ & ಸು ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಯಾವುದೇ ಸರ್ಕಾರಿ ನೌಕರನು ತಾನು ರಜೆಯ ಮೇಲೆ ತೆರಳುವ ಮುನ್ನ ಸಾಕಷ್ಟು ಮುಂಚಿತವಾಗಿ ರಜೆ ಕೋರಿ ಅರ್ಜಿಯನ್ನು ಮಂಜೂರಾತಿ ಪ್ರಾಧಿಕಾರಕ್ಕೆ ಸಲ್ಲಿಸಿ, ರಜೆ ಮಂಜೂರಾತಿಯನ್ನು ಪಡೆದುಕೊಂಡು ಹೋಗಬೇಕೆಂದು ಮತ್ತು ರಜೆಯನ್ನು ಹಕ್ಕೆಂದು ಸಾಧಿಸಲಾಗದೆಂದು ಕೆ.ಸಿ.ಎಸ್. ನಿಯಮಗಳಿದ್ದಾಗ್ಯೂ ನೀವು ನಿಮ್ಮ ಮದುವೆ ನಿಮಿತ್ತ ದಿನಾಂಕ 01–03–2011ರಿಂದ 21–03–2011ರವರೆಗೆ ಒಟ್ಟು 21 ದಿನಗಳ ಕಾಲ ಪರಿವರ್ತಿತ ರಜೆಯ ಮೇಲೆ ತೆರಳಿದ್ದು, ದಿನಾಂಕ: 22–03–2011ರಂದು ರಜೆ ಮುಗಿಸಿಕೊಂಡು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ಕರ್ತವ್ಯಕ್ಕೆ ಹಾಜರಾಗದೇ ನೀವು ದಿನಾಂಕ 30–03–2011ರಂದು ಈ ಕಛೇರಿಯಲ್ಲಿ ಮನವಿ ಸಲ್ಲಿಸಿ, ಸದರಿ ಮನವಿಯಲ್ಲಿ ನಿಮಗೆ ವಾಹನ ಅಪಘಾತದಲ್ಲಿ ಬಲಗೈಗೆ ಪೆಟ್ಟು ಬಿದ್ದು ರಕ್ತಗಾಯವಾಗಿದ್ದು, ಈ ಬಗ್ಗೆ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿದ್ದು, ವೈದ್ಯಾಧಿಕಾರಿಗಳು ದಿನಾಂಕ 02–04–2011ರವರೆಗೆ ವಿಶ್ರಾಂತಿ ಪಡೆಯಬೇಕೆಂದು ಸೂಚಿಸಿರುವುದರಿಂದ ರಜೆಯನ್ನು ಮುಂದುವರೆಸಲು ಅನುಮತಿ ನೀಡುವಂತೆ ಕೋರಿರುತ್ತೀರಿ. ಈ ಮಧ್ಯೆ, ನಿಮಗೆ ಠಾಣಾ ವ್ಯಾಪ್ತಿಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಮತ್ತು ಅಪರಾಧ ಪ್ರಕರಣಗಳು ಜರುಗದಂತೆ ತಡೆಗಟ್ಟಲು ಕೂಡಲೇ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಚಿಸಿ, ಈ ಕಛೇರಿಯ ಜ್ಞಾಪನ ಸಂ. ಸಿಬ್ಬಂದಿ (3)/ರಜೆ/56/2009, ದಿನಾಂಕ: 29–03–2011ರಲ್ಲಿ ತಿಳಿಸಿದ್ದರೂ ಸಹ ನೀವು ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರೆದು, ಠಾಣೆಯ ದೈನಂದಿನ ಕರ್ತವ್ಯಗಳಿಗೆ ಅಡ್ಡಿಪಡಿಸುವುದರೊಂದಿಗೆ ತರಬೇತಿ ಹೊಂದಿದ ಒಬ್ಬ ಅಧಿಕಾರಿಯಾಗಿ ಇಲಾಖೆಗೆ ಸಲ್ಲದ ಅತೀವ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವುದರೊಂದಿಗೆ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ದೋಷಾರೋಪಣೆಗೆ ಆ.ಪೊ.ಅ.ರವರು ಸಮಜಾಯಿಷಿ ಸಲ್ಲಿಸದ ಕಾರಣ ಆಪಾದಿತರು ಆರೋಪಗಳನ್ನು ಒಪ್ಪಿಕೊಂಡಿರುವುದಾಗಿ ಪರಿಗಣಿಸಿ ಅದರನ್ವಯ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ: 24–03–2012ರ ಆದೇಶದಲ್ಲಿ ಇವರಿಗೆ "ಎಚ್ಚರಿಕೆ" ದಂಡನೆಯನ್ನು ವಿಧಿಸಿ ಇವರ ಗೈರು ಹಾಜರಾದ ಅವಧಿ ದಿನಾಂಕ: 15–02–2011ರಿಂದ 28–02–2011ರವೆರೆಗೆ ಮತ್ತು ದಿನಾಂಕ 22–03–2011ರಿಂದ 11–05–2011ರವರೆಗೆ ಒಟ್ಟು 65 ದಿನ ಕೆ.ಸಿ.ಎಸ್. ನಿಯಮ 106ಎ ಪ್ರಕಾರ "ವೇತನ ರಹಿತ ರಜೆ" ಎಂದು ಪರಿಗಣಿಸಿ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ದಿನಾಂಕ: 26–07–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಆದರೆ ದಿನಾಂಕ: 15–02–2011ರಿಂದ 28–02–2011ರವರೆಗೆ ಒಟ್ಟು 14 ದಿನಗಳ ಅವಧಿ ಗೈರು ಹಾಜರಾದ ಬಗ್ಗೆ ಶಿಸ್ತು ಪ್ರಾಧಿಕಾರಿಗಳು ದೋಷಾರೋಪಣ ಪತ್ರದಲ್ಲಿ ಪ್ರಸ್ತಾಪಿಸಿದ ಕಾರಣ ಈ ಸದರಿ (14 ದಿನಗಳ) ಅವಧಿಯನ್ನು ಮಾತ್ರ ವೇತನ ಸಹಿತ ರಜೆ ಎಂದು ಮಾರ್ಪಡಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಬೇರಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಕರ್ನಾಟಕ ಪೊಲೀಸ್ ಅಧಿನಿಯಮ ಕಲಂ 23ರಡಿ "ಎಚ್ಚರಿಕೆ" ದಂಡನೆಯು ಇರುವುದಿಲ್ಲ. ಈ ಆದೇಶವು ತಾಂತ್ರಿಕ ದೋಷಗಳಿಂದ ಕೂಡಿದ್ದ ಕಾರಣ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 100 ಪೊಸಿಅ 2012, ಬೆಂಗಳೂರು, ದಿನಾಂಕ: 06-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎನ್. ರವೀಶ್, ಪಿಎಸ್‌ಐ, ಚಿಕ್ಕಜಾಜೂರು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಮಾರ್ಪಡಿಸಿ ಶಿಸ್ತು ಪ್ರಾಧಿಕಾರವು ವಿಧಿಸಿರುವ "ಎಚ್ಚರಿಕೆ" ದಂಡನೆಗೆ ಒದಲಾಗಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿ) ನಿಯಮಗಳ 23(1) (a)(i) ರನ್ವಯ "ವಾಗ್ದಂಡನೆ" (censure) ವಿಧಿಸಿ ಮಾರ್ಪಡಿಸಿದೆ. ಉಳಿದಂತೆ ದಿನಾಂಕ: 15–02–2011ರಿಂದ 28–02–2011ರವರೆಗೆ ಒಟ್ಟು 14 ದಿನಗಳ ರಜಾ ಅವಧಿಗೆ ವೇತನ ರಹಿತ ರಜೆಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 96**

**SC - 30**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ರಮೇಶ್, ಸಿಪಿಸಿ–298, ಬೆಸಗರಹಳ್ಳಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಮಂಡ್ಯ ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)/ಡಿಇ/29/2010–11 (ಓ.ಬಿ.ಸಂಖ್ಯೆ:24/2012–13) ದಿನಾಂಕ: 07.05.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/15/2012–13 (ಓ.ಬಿ.ಸಂಖ್ಯೆ: 06/2012–13) ದಿನಾಂಕ: 19.04.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04.06.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)40/2013–14 ದಿನಾಂಕ: 01.09.2013.

**ಪ್ರಸ್ತಾವನೆ:**

ಶ್ರೀ ರಮೇಶ್, ಸಿಪಿಸಿ–298, ಇವರು ಬೆಸಗರಹಳ್ಳಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಎನ್.ಕೆ. ನಾಗರಾಜು ಸಿಪಿಸಿ–69, ಬೆಸಗರಹಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರು ದಿನಾಂಕ: 22–08–2009ರಂದು ಕರ್ನಾಟಕ ಲೋಕಸೇವಾ ಆಯೋಗದ ಅಬಕಾರಿ ಉಪನಿರೀಕ್ಷಕರು ಹುದ್ದೆಗೆ ಅರ್ಜಿ ಸಲ್ಲಿಸಲು ಎನ್.ಓ.ಸಿ. ನೀಡುವಂತೆ ಎನ್.ಓ.ಸಿ.ಗಾಗಿ ಅರ್ಜಿಯನ್ನು ಬೆಸಗರಹಳ್ಳಿ ಪೊಲೀಸ್ ಠಾಣೆರವರ ಮುಖಾಂತರ ಎನ್.ಕೆ. ನಾಗರಾಜು ನೀಡಿದ್ದು, ಸದರಿ ಪುಸ್ತಕದಲ್ಲಿ ಈ ಕಛೇರಿಯಲ್ಲಿ ನಮೂದಿಸಿರುವುದು ಅನುಮಾನವಾಗಿ ಕಂಡು ಬಂದಿರುತ್ತದೆ. ಟಪಾಲು ನೀಡಿರುವ ಬಗ್ಗೆ ಪೋರ್ಜರಿ ಮಾಡಿರುವುದಾಗಿ ಕಂಡು ಬಂದಿರುತ್ತದೆ. ಇವರು ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು, ಅಬಕಾರಿ ಉಪನಿರೀಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಲು ಎನ್.ಓ.ಸಿ.ಯನ್ನು ಸಲ್ಲಿಸದೆ ಠಾಣಾ ವಿಭಾಗಕ್ಕೆ ನೀಡಿರುವುದಾಗಿ ದಾಖಲೆಯನ್ನು ಸೃಷ್ಟಿಸಿರುತ್ತಾರೆ. ಬೆಸಗರಹಳ್ಳಿ ಪೊಲೀಸ್ ಠಾಣೆಯ ಟಪಾಲು ಪುಸ್ತಕದಲ್ಲಿ ದಿನಾಂಕ: 02–09–2009ರಂದು ಮಂಡ್ಯ ಜಿಲ್ಲಾ ಪೊಲೀಸ್ ಕಛೇರಿಯ ಟಪಾಲು ವಿಭಾಗಕ್ಕೆ ಸಲ್ಲಿಸಿರುವ ದಾಖಲಾತಿಗಳ ಒಕ್ಕಣೆಯನ್ನು ಪರಿಶೀಲಿಸಿದಾಗ ಬೆಸಗರಹಳ್ಳಿ ಪೊಲೀಸ್ ಠಾಣೆಯಲ್ಲಿ ಠಾಣಾ ಬರಹಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಿಪಿಸಿ–298 ರಮೇಶ್‌ರವರು ಬೆಸಗರಹಳ್ಳಿ ಪೊಲೀಸ್ ಠಾಣೆಯ ಸಿಪಿಸಿ–69 ಎನ್.ಕೆ. ನಾಗರಾಜುರವರು ದಿನಾಂಕ: 22–08–2009ರಂದು ಅಬಕಾರಿ ಉಪನಿರೀಕ್ಷಕರ ಅರ್ಜಿ ಸಲ್ಲಿಸಲು ಕೋರಿದ್ದ ಅರ್ಜಿಯನ್ನು ಜಿಲ್ಲಾ ಪೊಲೀಸ್ ಕಛೇರಿಗೆ ಕಳುಹಿಸಲು ಪಡೆದುಕೊಂಡು ಕೂಡಲೇ ಕಳುಹಿಸದೇ ತದನಂತರ ದಿನಗಳಲ್ಲಿ

ದಿನಾಂಕ: 02–09–2009ರಂದು ಬೆಸಗರಹಳ್ಳಿ ಪೊಲೀಸ್ ಠಾಣೆಯಿಂದ ಜಿಲ್ಲಾ ಪೊಲೀಸ್ ಕಛೇರಿಯ ಟಪಾಲು ವಿಭಾಗಕ್ಕೆ ಸಲ್ಲಿಸಿದ್ದ ದಾಖಲಾತಿ ಕ್ರಮಸಂಖ್ಯೆ 01 ರಿಂದ 07ರ ನಂತರ ಕ್ರಮ ಸಂಖ್ಯೆ 08ರಲ್ಲಿ ಸಿಪಿಸಿ–69 ಎನ್.ಕೆ. ನಾಗರಾಜುರವರು ಅಬಕಾರಿ ಇಲಾಖೆಯ ಇಎಸ್ಐ ಹುದ್ದೆಗೆ ಅರ್ಜಿ ಸಲ್ಲಿಸಲು ಎನ್.ಓ.ಸಿ. ಕೋರಿರುವ ಅರ್ಜಿ ಎಂದು ತದನಂತರ ಸೇರಿಸಿ ದಿನಾಂಕ: 02–09–2009ರಂದೇ ಸದರಿ ಅರ್ಜಿಯನ್ನು ಡಿಪಿಓ ಟಪಾಲು ವಿಭಾಗಕ್ಕೆ ಸಲ್ಲಿಸಿರುವಂತೆ ಕಂಡು ಬರುವ ಹಾಗೆ ಟಪಾಲು ಪುಸ್ತಕದಲ್ಲಿ ನಮೂದು ಮಾಡಿ ಸಿಪಿಸಿ–298 ರಮೇಶ್‌ರವರು ಕರ್ತವ್ಯ ಲೋಪ ಎಸಗಿರುವುದು ಕಂಡು ಬಂದಿರುತ್ತದೆ. ಶ್ರೀ ಎನ್.ಕೆ. ನಾಗರಾಜು ಸಿಪಿಸಿ–69 ಇವರು ಎನ್.ಓ.ಸಿ. ಅರ್ಜಿಯನ್ನು ಈಗಾಗಲೇ ಡಿ.ಪಿ.ಓ. ಕಛೇರಿಯ ಟಪಾಲು ಶಾಖೆಗೆ ಸಲ್ಲಿಸಿಕೊಂಡಿರುವುದಾಗಿ ಠಾಣಾ ಬರಹಗಾರರಿಂದ ನಮೂದಿಸಿಕೊಂಡು ಜೆರಾಕ್ಸ್ ಪ್ರತಿಯನ್ನು ಈ ಕಛೇರಿಗೆ ನೀಡಿರುವುದು ಹಾಗೂ ಠಾಣಾ ಬರಹಗಾರರಾದ ಶ್ರೀ ರಮೇಶ ಸಿಪಿಸಿ–298 ಬೆಸಗರಹಳ್ಳಿ ಪೊಲೀಸ್ ಠಾಣೆ ಇವರುಗಳು ಅಬಕಾರಿ ಉಪನಿರೀಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಲು ಕೋರಿದ್ದ ಅರ್ಜಿಯನ್ನು ಜಿಲ್ಲಾ ಪೊಲೀಸ್ ಕಛೇರಿಗೆ ಕಳುಹಿಸದೇ ತದನಂತರ ದಿನಗಳಲ್ಲಿ ದಿನಾಂಕ: 02–09–2009ರಂದು ಕ್ರಮ ಸಂಖ್ಯೆ: 01 ರಿಂದ 07ರ ನಂತರ ಕ್ರಮ ಸಂಖ್ಯೆ 08ರಲ್ಲಿ ಸೇರಿಸಿ ಡಿಪಿಓ ಟಪಾಲು ವಿಭಾಗಕ್ಕೆ ಸಲ್ಲಿಸಿರುವಂತೆ ಕಂಡು ಬರುವ ಹಾಗೇ ನಮೂದು ಮಾಡಿ ಮೇಲಾಧಿಕಾರಿಗಳಿಗೆ ತಪ್ಪು ದಾರಿಗೆ ಎಳೆಯುವ ಪ್ರಯತ್ನ ಮಾಡಿರುವುದು ಕಂಡು ಬಂದಿದ್ದು, ಇದು ಗಂಭೀರವಾದ ದುರ್ನಡತೆಯಾಗಿರುತ್ತದೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 07–05–2012ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–04–2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅಧಿಕಾರ ದುರುಪಯೋಗ, ಅತೀವ ದುರ್ನಡತೆ ಎಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಿಅ 2013, ಬೆಂಗಳೂರು, ದಿನಾಂಕ: 06-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಮೇಶ್, ಸಿಪಿಸಿ–298, ಬೆಸಗರಹಳ್ಳಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 97**

**SC - 30**

## ತೋಟಗಾರಿಕೆ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲಾ ಕೇಂದ್ರಸ್ಥಾನದಲ್ಲಿ ರೇಷ್ಮೆ ಇಲಾಖೆಯ ಖಾಲಿ ಕಟ್ಟಡದಲ್ಲಿ ತಾತ್ಕಾಲಿಕವಾಗಿ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಬಾಡಿಗೆ ಆಧಾರದ ಮೇಲೆ ಕೊಠಡಿಗಳನ್ನು ನೀಡುವ ಕುರಿತು.

**ಓದಲಾಗಿದೆ :** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಪತ್ರ ಸಂಖ್ಯೆ : ರೇನಿ/ಸ್ಥಿರ/ಆಸ್ತಿ/ಕಟ್ಟಡ/ರಾಜಿಕೇಂ/ಅಕಾ/11/2013–14, ದಿನಾಂಕ : 02–01–2014.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 02–01–2014ರ ಪತ್ರದಲ್ಲಿ ರಾಮನಗರ ಪಟ್ಟಣವು ಜಿಲ್ಲಾ ಕೇಂದ್ರವಾಗಿದ್ದು, ತುರ್ತಾಗಿ ಅಗ್ನಿಶಾಮಕ ಠಾಣೆ ಪ್ರಾರಂಭಿಸುವ ಸಂಬಂಧ ರೇಷ್ಮೆ ಇಲಾಖೆಗೆ ಸೇರಿದ ಕಟ್ಟಡವು ನೆಲ ಮತ್ತು ಮೊದಲನೇ ಮಹಡಿ ಹೊಂದಿದ್ದು, ನೆಲ ಹಂತದಲ್ಲಿನ ಕೊಠಡಿಗಳು ಖಾಲಿ ಇರುವುದಾಗಿ ಹಾಗೂ ಈ ಕಟ್ಟಡಕ್ಕೆ ಹೊಂದಿಕೊಂಡಂತೆ ಹಳೆಯ ಗ್ಯಾರೇಜ್ ಹಿಂಭಾಗದಲ್ಲಿದ್ದು, ಇದು ಅಗ್ನಿಶಾಮಕ ವಾಹನ ನಿಲುಗಡೆಗೆ ಸೂಕ್ತ ಸ್ಥಳವಾಗಿರುವುದರಿಂದ ನೆಲ ಹಂತದಲ್ಲಿನ ಕೊಠಡಿಗಳು ಹಾಗೂ ಈ ಕಟ್ಟಡಕ್ಕೆ ಹೊಂದಿಕೊಂಡಂತಹ ಹಳೆಯ ಗ್ಯಾರೇಜ್ ಹಿಂಭಾಗದ ಸ್ಥಳವನ್ನು ಸುಮಾರು 2 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಅನುಕೂಲ ಮಾಡಿಕೊಡಬೇಕೆಂದು ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿಗಳು, ಬೆಂಗಳೂರ ದಕ್ಷಿಣ ವಲಯ, ಬೆಂಗಳೂರು ಇವರು ಕೋರಿರುವ ಮೇರೆಗೆ, ಸದರಿ ಕಟ್ಟಡದ ನೆಲಮಹಡಿಯಲ್ಲಿನ 36'X16' ರ ವಿಸ್ತೀರ್ಣದ 04 ಕೊಠಡಿಗಳಲ್ಲಿ ಶೌಚಾಲಯಕ್ಕೆ ಹೊಂದಿಕೊಂಡಿರುವ 01 ಕೊಠಡಿಯ ವಿಸ್ತೀರ್ಣ 36'X18' ಹಾಗೂ 64'X18' ವಿಸ್ತೀರ್ಣದ ಒಂದು ರೀಲಿಂಗ್ ಶೇಡ್‌ನ್ನು ಅಗ್ನಿಶಾಮಕ ಠಾಣೆ

ಪ್ರಾರಂಭಿಸುವ ಸಲುವಾಗಿ ನೀಡಲು ಶಿಫಾರಸ್ಸು ಮಾಡುತ್ತಾ, ಈ ಕಟ್ಟಡಗಳಿಗೆ ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸುವ ಬಾಡಿಗೆದರದ ಆಧಾರದ ಮೇಲೆ ತಾತ್ಕಾಲಿಕವಾಗಿ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು, ನೀಡಲು ಹಾಗೂ ಆದೇಶವನ್ನು ನೀಡಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರಾಮನಗರ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವ ರೇಷ್ಮೆ ಇಲಾಖೆ ಕಟ್ಟಡದ ನೆಲಮಹಡಿಯಲ್ಲಿನ 36'X18' ವಿಸ್ತೀರ್ಣದ 04 ಕೊಠಡಿಗಳಲ್ಲಿ ಶೌಚಾಲಯಕ್ಕೆ ಹೊಂದಿಕೊಂಡಿರುವ 01 ಕೊಠಡಿಯ ವಿಸ್ತೀರ್ಣ 36'X18' ಹಾಗೂ 64'X18' ವಿಸ್ತೀರ್ಣದ ಒಂದು ರೀಲಿಂಗ್ ಶೆಡ್‌ನ್ನು ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಮತ್ತು ಈ ಕಟ್ಟಡಗಳಿಗೆ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ದರದ ಆಧಾರದ ಮೇಲೆ ತಾತ್ಕಾಲಿಕವಾಗಿ ಅಗ್ನಿಶಾಮಕ ಕಛೇರಿಗೆ ನೀಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂ. : ತೋಇ 03 ರೇಯೋವಿ 2014, ಬೆಂಗಳೂರು, ದಿನಾಂಕ : 27-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ರಾಮನಗರ ಜಿಲ್ಲಾ ಕೇಂದ್ರ ಸ್ಥಾನದಲ್ಲಿ ತಾತ್ಕಾಲಿಕವಾಗಿ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ರೇಷ್ಮೆ ಇಲಾಖೆಗೆ ಸೇರಿದ ಕಟ್ಟಡದ ನೆಲಮಹಡಿಯಲ್ಲಿನ 36'X18' ವಿಸ್ತೀರ್ಣದ 04 ಕೊಠಡಿಗಳಲ್ಲಿ ಶೌಚಾಲಯಕ್ಕೆ ಹೊಂದಿಕೊಂಡಿರುವ 01 ಕೊಠಡಿಯ ವಿಸ್ತೀರ್ಣ 36'X18' ಹಾಗೂ 64'X18' ವಿಸ್ತೀರ್ಣದ ಒಂದು ರೀಲಿಂಗ್ ಶೆಡ್‌ನ್ನು ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ಬಾಡಿಗೆ ದರದ ಆಧಾರದ ಮೇಲೆ ತಾತ್ಕಾಲಿಕವಾಗಿ ಅಗ್ನಿಶಾಮಕ ಕಛೇರಿಗೆ ನೀಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 143**

**ಕೆ. ಉಮಾವತಿ**

ಪೀಠಾಧಿಕಾರಿ (ಪ್ರಭಾರ),

ತೋಟಗಾರಿಕೆ ಇಲಾಖೆ (ರೇಷ್ಮೆ).

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : 2013-14ನೇ ಸಾಲಿಗೆ ಕರ್ನಾಟಕ ರಾಜ್ಯ ವಕೀಲರ ಪರಿಷತ್ತು (Bar Council) ಬೆಂಗಳೂರು, ಇವರಿಗೆ ರೂ. 9.80 ಲಕ್ಷ ಅನುದಾನ ಮಂಜೂರಾತಿ : ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 210 ಎಲ್‌ಸಿಎಲ್ 2002, ದಿನಾಂಕ : 10-07-2003.
2. ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಹೆಚ್‌ಸಿಬಿ/230/ಕೆಎಸ್‌ಬಿಸಿ/1983, ದಿನಾಂಕ : 06-12-2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ : 10-07-2003ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ (Bar Council) ರೂ. 9.80 ಲಕ್ಷಗಳನ್ನು ನಿಗದಿಗೊಳಿಸಿ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ : 06-12-2013ರ ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ (Bar Council) 2013-14ನೇ ಸಾಲಿಗೆ ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ: ಕಾರ್ಯಾಗಾರ, ವಿಚಾರ ಸಂಕಿರಣ ಹಾಗೂ ಕಾನೂನು ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸಲು ಸಹಾಯಾನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಸಕ್ತ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2014-00-800-4-00-059ರಡಿ ರೂ. 22.50 ಲಕ್ಷಗಳ ಆಯವ್ಯಯ ಅವಕಾಶವಿದ್ದು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ : 10-07-2003ರ ತಿದ್ದುಪಡಿಯಲ್ಲಿ ಸದರಿ ಉದ್ದೇಶಕ್ಕಾಗಿ ನಿಗದಿಗೊಳಿಸಿರುವಂತೆ ರೂ. 9.80 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಆದೇಶ ಸಂಖ್ಯೆ : ಲಾ 195 ಎಲ್‌ಸಿಎಲ್ 2013, ಬೆಂಗಳೂರು ದಿನಾಂಕ : 25-01-2014.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ (Bar Council) 2013-14ನೇ ಸಾಲಿಗೆ ರೂ. 9.80 ಲಕ್ಷಗಳ (ರೂಪಾಯಿ ಒಂಬತ್ತು ಲಕ್ಷದ ಎಂಬತ್ತು ಸಾವಿರ ಮಾತ್ರ) ಸಹಾಯನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2013-14ನೇ ಸಾಲಿನ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು (Utilization Certificate) ಅಡ್ವೋಕೇಟ್ ಜನರಲ್ (ಸಕ್ಷಮ ಪ್ರಾಧಿಕಾರ)ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ. ಈ ಸಹಾಯಾನುದಾನವನ್ನು ಲೆಕ್ಕ ಶಿರ್ಷಿಕೆ 2014-00-800-4-00-ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಉಪ ಶೀರ್ಷಿಕೆ 059-ಇತರೆ ಖರ್ಚು ಇದರಡಿಯ ಯೋಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ವಸತಿ, ನಗರಾಭಿವೃದ್ಧಿ ಮತ್ತು ಕಾನೂನು ಹಾಗೂ ಇ-ಆಡಳಿತ ಇಲಾಖೆಯವರ ಟಿಪ್ಪಣಿ ಸಂಖ್ಯೆ : ವನಇ 19 ಆಂಅಬಿ 2014, ದಿನಾಂಕ : 10-01-2014ರ ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 144**

**SC-25**

**ಹೆಚ್.ಎಸ್. ಜಯರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ವಿವಿಧ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಗ್ರಾಮ ವಿದ್ಯುತ್ ಪ್ರತಿನಿಧಿಗಳಾಗಿ ಸೇವೆ ಸಲ್ಲಿಸುತ್ತಿರುವ (ಮೈಕ್ರೋ ಫೀಡರ್ ಫ್ರಾಂಚೈಸಿ) ನೌಕರರ ಬೇಡಿಕೆಗಳ ಕುರಿತು ಪರಿಶೀಲಿಸಲು ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ (ರಿ), ದಾವಣಗೆರೆ ಇವರ ದಿನಾಂಕ : 26-11-2013ರ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ ಮನವಿಯಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ (ರಿ), ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಕರ್ನಾಟಕ ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ 2003-04ರಿಂದ ವಿವಿಧ ದಿನಾಂಕಗಳಲ್ಲಿ ನೇಮಕಗೊಂಡು ಕರ್ತವ್ಯ ನಿರ್ವಹಿಸುತ್ತಿರುವ 3699 ಗ್ರಾಮ ವಿದ್ಯುತ್ ಪ್ರತಿನಿಧಿಗಳ ಸೇವೆಯನ್ನು ಖಾಯಂಗೊಳಿಸಬೇಕೆಂದು ಕೋರಿ ಪೂರಕವಾಗಿ ಈ ಕೆಳಕಂಡ ಕೆಲವು ವಿಷಯಗಳನ್ನು ಪ್ರಸ್ತಾಪಿಸಿರುತ್ತಾರೆ.

1. ಗ್ರಾಮೀಣ ಭಾಗದಲ್ಲಿ ವಿದ್ಯುತ್ ಬಳಕೆದಾರರಿಗೆ ಮತ್ತು ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುತ್ತಿದ್ದ ತೊಂದರೆಗಳನ್ನು ಸರಿಪಡಿಸಲು ಆಯಾ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿರುವ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸುವ ದೃಷ್ಟಿಯಿಂದ ಒಂದು ಆಯೋಗವನ್ನು ರಚಿಸಿ, ಆ ಆಯೋಗದ ವರದಿಯ ಆಧಾರದ ಮೇಲೆ 2004-05ನೇ ಸಾಲಿನ ಆಯವ್ಯಯದಲ್ಲಿ ಗ್ರಾಮ ವಿದ್ಯುತ್ ಸೇವಕ ಎಂಬ ಹುದ್ದೆಯನ್ನು ಭರ್ತಿ ಮಾಡಲು ಪ್ರಸ್ತಾಪಿಸಲಾಗಿತ್ತು.
2. ಈ ಗ್ರಾಮ ವಿದ್ಯುತ್ ಪ್ರತಿನಿಧಿಗಳನ್ನು ನೇಮಕ ಮಾಡಿಕೊಳ್ಳಲು ಆಯಾ ವಿದ್ಯುತ್ ಸರಬರಾಜು ಕಂಪನಿಗಳು ದಿನ ಪತ್ರಿಕೆಗಳಲ್ಲಿ ಪ್ರಕಟಣೆ ನೀಡಿದ್ದು, ಅದರನ್ವಯ ಸದರಿ ಗ್ರಾಮ ವಿದ್ಯುತ್ ಪ್ರತಿನಿಧಿಗಳು ಅರ್ಜಿ ಸಲ್ಲಿಸಿ ಆಯಾ ಕಂಪನಿಯಿಂದ ರಚಿಸಲಾಗಿದ್ದ ನೇಮಕಾತಿ ಸಮಿತಿಯ ಮೂಲಕ ಅಭ್ಯರ್ಥಿಗಳ ಅರ್ಹತೆಯನ್ನು ಆಧರಿಸಿ ನೇಮಕ ಮಾಡಿಕೊಳ್ಳಲಾಗಿದೆ.
3. ಈ ರೀತಿ ನೇಮಕಗೊಂಡ ಪ್ರತಿಯೊಬ್ಬ ಗ್ರಾಮ ವಿದ್ಯುತ್ ಪ್ರತಿನಿಧಿಯಿಂದ 50-75 ಸಾವಿರದವರೆಗೆ ಬ್ಯಾಂಕ್ ಗ್ಯಾರಂಟಿ ಪಡೆದು ಒಡಂಬಡಿಕೆ ಮಾಡಿಕೊಳ್ಳಲಾಗಿದೆ.
4. ಈ ರೀತಿ ನೇಮಕಗೊಂಡ ಗ್ರಾಮ ವಿದ್ಯುತ್ ಪ್ರತಿನಿಧಿಗಳನ್ನು 2006-07ರಲ್ಲಿ ಆರ್.ಜಿ.ಜಿ.ವೈ. ಅಡಿಯಲ್ಲಿ ಕೇಂದ್ರ ಸರ್ಕಾರದಿಂದ ಹಣ ಪಡೆಯಲು ಮೈಕ್ರೋ ಫೀಡರ್ ಫ್ಯಾಂಚಾಯಿಸ್ ಎಂದು ಹೆಸರು ಬದಲಾಯಿಸಲಾಗಿದೆ.
5. ಕಳೆದ 2003-04ರಿಂದ ಕೇವಲ ರೂ. 3-4 ಸಾವಿರದ ಸಂಭಾವನೆ ಪಡೆದು ಸತತವಾಗಿ, ಪ್ರಾಮಾಣಿಕವಾಗಿ ಸೇವೆ ಸಲ್ಲಿಸುತ್ತಿರುವ ತಮ್ಮ ಸೇವೆಯನ್ನು ಖಾಯಂಗೊಳಿಸಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಎಲ್ಲಾ ವಿದ್ಯುತ್ ಕಂಪನಿಗಳಲ್ಲಿ ಗ್ರಾಮ ವಿದ್ಯುತ್ ಪ್ರತಿನಿಧಿಗಳಾಗಿ (ಮೈಕ್ರೋ ಫೀಡರ್ ಫ್ರಾಂಚೈಸಿ) ಸೇವೆ ಸಲ್ಲಿಸುತ್ತಿರುವ ನೌಕರರ ಬೇಡಿಕೆಯನ್ನು ನಿಯಮಾನುಸಾರ ಪರಿಶೀಲಿಸಿ, ಇವರುಗಳ ಬೇಡಿಕೆಯ ಬಗ್ಗೆ ಪರಿಶೀಲಿಸಲು ಸರ್ಕಾರವು ಒಂದು ಉನ್ನತ ಮಟ್ಟದ ಸಮಿತಿಯನ್ನು ರಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ :-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 174 ಇಇಬಿ 2012, ಬೆಂಗಳೂರು ದಿನಾಂಕ : 31-12-2013.**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಗ್ರಾಮ ವಿದ್ಯುತ್ ಪ್ರತಿನಿಧಿಗಳಾಗಿ (ಮೈಕ್ರೋ ಫೀಡರ್ ಫ್ರಾಂಚೈಸಿ) ಸೇವೆ ಸಲ್ಲಿಸುತ್ತಿರುವ ನೌಕರರಿಗೆ ಸೇವಾ ಭದ್ರತೆ ಒದಗಿಸಲು ನಿಯಮಗಳಲ್ಲಿ ಅವಕಾಶವಿದೆಯೇ ? ಎಂಬ ಬಗ್ಗೆ ಪರಿಶೀಲಿಸಲು ಈ ಕೆಳಕಂಡ ಅಧಿಕಾರಿ/ಅಧಿಕಾರೇತರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ :-

| | | |
|---|---|---|
| 1. | ವ್ಯವಸ್ಥಾಪಕ ನಿರ್ದೇಶಕರು, ಬೆಸ್ಕಾಂ | ಅಧ್ಯಕ್ಷರು |
| 2. | ವ್ಯವಸ್ಥಾಪಕ ನಿರ್ದೇಶಕರು, ಹೆಸ್ಕಾಂ | ಸದಸ್ಯರು |
| 3. | ಜನರಲ್ ಮ್ಯಾನೇಜರ್ (ಆಡಳಿತ ಮತ್ತು ಮಾನವ ಸಂಪನ್ಮೂಲ), ಗೆಸ್ಕಾಂ | ಸದಸ್ಯರು |
| 4. | ಅಧೀಕ್ಷಕ ಅಭಿಯಂತರರು, ಒ & ಎಂ ಸರ್ಕಲ್, ಮೈಸೂರು | ಸದಸ್ಯರು |
| 5. | ನಿರ್ದೇಶಕರು (ತಾಂತ್ರಿಕ), ಹೆಸ್ಕಾ | ಸದಸ್ಯರು |
| 6. | ನಿರ್ದೇಶಕರು (ಪ್ರಸರಣ), ಕೆಪಿಟಿಸಿಎಲ್ | ಸದಸ್ಯರು |
| 7. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ/ಸಿಆಸುಇ/ಕಾರ್ಮಿಕ/ಕಾನೂನು/ಆರ್ಥಿಕ ಇಲಾಖೆ ಇವರುಗಳು ನಾಮನಿರ್ದೇಶನ ಮಾಡುವ ಕನಿಷ್ಠ ಉಪ ಕಾರ್ಯದರ್ಶಿ ವೃಂದಕ್ಕೆ ಕಡಿಮೆ ಇಲ್ಲದ ಒಬ್ಬೊಬ್ಬ ಪ್ರತಿನಿಧಿಗಳು | ಸದಸ್ಯರು |
| 8. | ಶ್ರೀ ಎಸ್.ಆರ್. ಶರಣಪ್ಪ, ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ | ಸದಸ್ಯರು |
| 9. | ಶ್ರೀ ಶಿವರುದ್ರಪ್ಪ, ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ | ಸದಸ್ಯರು |
| 10. | ಶ್ರೀ ಎಸ್.ಎ. ಗೂಳಿ, ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ | ಸದಸ್ಯರು |

| | | |
|---|---|---|
| 11. | ಶ್ರೀ ಟಿ. ರವಿ, ಸಹಕಾರ್ಯದರ್ಶಿ, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ | ಸದಸ್ಯರು |
| 12. | ಶ್ರೀ ಎಂ.ಎಸ್. ಬಬ್ಬಜ್ಜಿ, ಸಲಹೆಗಾರರು, ಕರ್ನಾಟಕ ರಾಜ್ಯ ಗ್ರಾಮ ವಿದ್ಯುತ್ ಪ್ರತಿನಿಧಿಗಳ ಒಕ್ಕೂಟ | ಸದಸ್ಯರು |
| 13. | ಕಾರ್ಯನಿರ್ವಾಹಕ ಅಭಿಯಂತರರು, ಇ.ಎಂ.ಸಿ–1, ಇಂಧನ ಇಲಾಖೆ | ಸದಸ್ಯ – ಕಾರ್ಯದರ್ಶಿ |

ಸಮಿತಿಯು ಈ ಕೆಳಕಂಡ terms of reference ಗಳನ್ನು ಪರಿಶೀಲಿಸಿ **ನಾಲ್ಕು ತಿಂಗಳೊಳಗಾಗಿ** ಸರ್ಕಾರಕ್ಕೆ ವರದಿ ಸಲ್ಲಿಸಲು ತಿಳಿಸಲಾಗಿದೆ.

1. To study and examine the basis of oppointment of GVPs and existing MOU between GVP (MFF) & ESCOM's
2. To study the Apex Court verdict in case of Smt. Umadevi & others & its application visa- vis GVPs.
3. Scope & nature of GVP (MFF) & to study the necessity of GVPs in all ESCOM's for meter reading, billing & cash collection in Rural part.
4. To study the benefits provided to GVP's by ESCOMs
5. To study the procedure in engaging GVPs in their respective ESCOMs.
6. To study the existing vacancy position equivalent to GVP (MFF) i.e. Junior Meter Reader. Overseer/Meter Reader/Operator.
7. To examine the necessity of the availability of GVPs for rural area, the engagement on permanent/Temporary basis.
8. To study the statutory requirements in case of GVPs (MFF).
9. To study the Present demand of GVPs (MFF).
10. To study the statutory provision available as per R and P (Recruitment and promotion) Regulations of KPTCL.
11. Any other issues related to contract basis / outsource employees of all ESCOMs.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 145**
**SC-100**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ** : "ಜವಾಹರಲಾಲ್ ನೆಹರು ನ್ಯಾಶನಲ್ ಸೋಲಾರ್ ಮಿಷನ್" ಕಾರ್ಯಕ್ರಮದಲ್ಲಿ ಎನ್.ಟಿ.ಪಿ.ಸಿ–ವಿ.ವಿ.ಎನ್.ಎಲ್. ಮುಖಾಂತರ ರಾಜ್ಯಕ್ಕೆ ಹಂಚಿಕೆಯಾಗಿರುವ ಸಂಯೋಜಿತ ಸೌರ ವಿದ್ಯುತ್‌ನ್ನು ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಇಎನ್ 88 ಎನ್‌ಸಿಇ 2011, ದಿನಾಂಕ : 11–02–2011.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 81 ವಿಎಸ್‌ಸಿ 2011, ದಿನಾಂಕ : 11–01–2012.
3. Chief General Manager (Operations) ಬೆ.ವಿ.ಕಂ. ರವರ ಪತ್ರ ಸಂಖ್ಯೆ : BESCOM/GMPP/BC-39/DGM-1/AGM-1/F-2472B/08-09/7750-56, ದಿನಾಂಕ : 19–03–2013.
4. ವ್ಯವಸ್ಥಾಪಕ ನಿರ್ದೇಶಕರು, ಮೆಸ್ಕಾಂ ರವರ ಪತ್ರ ಸಂಖ್ಯೆ : MD/MESCOM/PS/SE(C&RP)/2013-14/263-267, ದಿನಾಂಕ : 03–12–2013.
5. ಎನ್.ಟಿ.ಪಿ.ಸಿ.–ವಿ.ವಿ.ಎನ್.ಎಲ್. ರವರ ಪತ್ರ ಸಂಖ್ಯೆ : NVVN/JNNSM/NP-Solar/Allocation?S3/03, ದಿನಾಂಕ : 07–04–2011.

**ಪ್ರಸ್ತಾವನೆ :**

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗರವರ ಆದೇಶದ ಮೇರೆಗೆ ವಿದ್ಯುತ್ ವಿತರಣಾ ಕಂಪನಿಗಳು ತಮ್ಮ ಒಟ್ಟು ವಿದ್ಯುತ್ ಖರೀದಿಯ ಮೇಲೆ ಶೇ. 0.25 ರಷ್ಟು ವಿದ್ಯುತ್ತನ್ನು ಸೌರ ವಿದ್ಯುತ್‌ನಿಂದ ಪಡೆಯಲು ಸೌರ ವಿದ್ಯುತ್ ಅನಿವಾರ್ಯತೆಯನ್ನು ನಿಗದಿಪಡಿಸಲಾಗಿರುತ್ತದೆ. ಈ ಸಂಬಂಧವಾಗಿ ಸೌರ ವಿದ್ಯುತ್ ನೀತಿಯನ್ನು ದಿನಾಂಕ : 01–07–2011 ರಿಂದ ಜಾರಿಗೊಳಿಸಲಾಗಿರುತ್ತದೆ. ಈ ನಿಟ್ಟಿನಲ್ಲಿ ರಾಜ್ಯವು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಮೂಲಕ 200 ಮೆ.ವ್ಯಾ. ಸ್ಥಾಪನೆಗೆ ಕ್ರಮ ಕೈಗೊಳ್ಳಲಾಗಿದೆ ಹಾಗೂ ಇದು ವಿವಿಧ ಹಂತದಲ್ಲಿದೆ.

ರಾಜ್ಯಕ್ಕೆ ರಾಷ್ಟ್ರೀಯ ಶಾಖೋತ್ಪನ್ನ ವಿದ್ಯುತ್ ನಿಗಮ ನಿಯಮಿತ (ಎನ್.ಟಿ.ಪಿ.ಸಿ)–ವಿದ್ಯುತ್ ವ್ಯಾಪಾರ ನಿಗಮ ನಿಯಮಿತ (ವಿವಿಎನ್‌ಎಲ್) ರವರಿಂದ ಸೌರ ವಿದ್ಯುತ್‌ನ್ನು ಶಾಖೋತ್ಪನ್ನ ವಿದ್ಯುತ್‌ನೊಂದಿಗೆ ಸೇರಿಸಿ, ಸಂಯೋಜಿತ ಸೌರ ವಿದ್ಯುತ್‌ಗೆ ಖರೀದಿ ಒಪ್ಪಂದವನ್ನು (ಪಿಪಿಎ) ಎಲ್ಲಾ ವಿತರಣಾ ಕಂಪನಿಗಳು ಮಾಡಬೇಕಾಗಿತ್ತು. ಆದರೆ ರಾಜ್ಯಕ್ಕೆ ಒಟ್ಟು ಸಾಮರ್ಥ್ಯ ಎಷ್ಟು ಎಂಬುದರ ಬಗ್ಗೆ ನಿಖರ ಮಾಹಿತಿ ಇಲ್ಲದಿದ್ದುದರಿಂದ ಹಾಗೂ ಶೀಘ್ರದಲ್ಲಿ ಪಿಪಿಎ ಮಾಡಿಕೊಳ್ಳಬೇಕಾದ ಅನಿವಾರ್ಯತೆಯಿಂದ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಸೌರ ವಿದ್ಯುತ್ ಸ್ಥಾವರ ಯೋಜನೆಯ ವಿದ್ಯುತ್ ಖರೀದಿ ಒಪ್ಪಂದವನ್ನು ದಿನಾಂಕ : 07–01–2011 ರಂದು ರಾಜ್ಯದ ಎಲ್ಲಾ ವಿದ್ಯುತ್ ಸಂಬಂಧ ಕಂಪನಿಗಳ ಪರವಾಗಿ ಸಹಿ ಮಾಡಲಾಗಿರುತ್ತದೆ. ಸರ್ಕಾರವು ಮೇಲೆ ಓದಲಾದ (1)ರಲ್ಲಿ, ಬೆಂಗಳೂರು ವಿದ್ಯುತ್ ವಿತರಣಾ ಕಂಪನಿಗೆ ರಾಜ್ಯದ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ ಎನ್.ಟಿ.ಪಿ.ಸಿ.–ವಿವಿಎನ್‌ಎಲ್ ರವರೊಂದಿಗೆ ಸಹಿ ಮಾಡುವುದಕ್ಕೆ ಘಟನೋತ್ತರ ಅನುಮತಿಯನ್ನು ನೀಡಲಾಗಿರುತ್ತದೆ.

ಬೆ.ವಿ.ಕಂ. ಮೇಲೆ ಓದಲಾದ ಪತ್ರ (3)ರಲ್ಲಿ ಎನ್.ಟಿ.ಪಿ.ಸಿ.–ವಿವಿಎನ್ಎಲ್ ರಿಂದ ಹಂಚಿಕೆಯಾದ 70 ಮೆ.ವ್ಯಾ. ಸಂಯೋಜಿತ ವಿದ್ಯುತ್‌ನ್ನು ವಿತರಣಾ ಕಂಪನಿಗಳಿಗೆ ಹಂಚುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಹಾಗೂ ಈ ಸಾಮರ್ಥ್ಯಕ್ಕೆ ಅವಶ್ಯಕವಾದ ಎಲ್.ಸಿ. ಯನ್ನು ವಿದ್ಯುತ್ ವಿತರಣಾ ಕಂಪನಿಗಳು ನೀಡಬೇಕಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (4)ರಲ್ಲಿ ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಎನ್.ಟಿ.ಪಿ.ಸಿ–ವಿವಿಎನ್ಎಲ್ ರವರಿಂದ ನೀಡಲಾಗಿರುವ 70 ಮೆ.ವ್ಯಾ. ಸಂಯೋಜಿತ ಸೌರ ವಿದ್ಯುತ್ತಿನಲ್ಲಿ ತಮ್ಮ ಕಂಪನಿಗೆ ಬರುವ ಭಾಗವನ್ನು ಹಂಚಿಕೆ ಮಾಡಬೇಕೆಂದು ಕೋರಿರುತ್ತಾರೆ. ಮೇಲೆ ಓದಲಾದ ಪತ್ರ (3)ರಲ್ಲಿ ಒಟ್ಟು ಸಂಯೋಜಿತ ಸೌರ ವಿದ್ಯುತ್‌ನ 70 ಮೆ.ವ್ಯಾ. ಸಾಮರ್ಥ್ಯದಲ್ಲಿ 5 ಮೆ.ವ್ಯಾ. ಸಾಮರ್ಥ್ಯವನ್ನು 25–06–2012ರಲ್ಲಿ ಅನುಷ್ಠಾನಗೊಳಿಸಲಾಗಿದೆ ಹಾಗೂ 45 ಮೆ.ವ್ಯಾ. ಸಾಮರ್ಥ್ಯವನ್ನು 16–08–2013 ರಲ್ಲಿ ಅನುಷ್ಠಾನಗೊಳಿಸಿ ಉತ್ಪಾದನೆಯಾದ ವಿದ್ಯುತ್‌ನ್ನು ರಾಜ್ಯಕ್ಕೆ ಪೂರೈಸಲಾಗುತ್ತಿದೆ. ಬಾಕಿ 20 ಮೆ.ವ್ಯಾ. ಸಾಮರ್ಥ್ಯವನ್ನು ಸದ್ಯದಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ. ಈ ಹಿನ್ನೆಲೆಯಲ್ಲಿ ಎನ್.ಟಿ.ಪಿ.ಸಿ–ವಿವಿಎನ್ಎಲ್ ನ 70 ಮೆ.ವ್ಯಾ. ಸಾಮರ್ಥ್ಯದಿಂದ ಉತ್ಪಾದನೆಯಾಗುವ ಸಂಯೋಜಿತ ಸೌರ ವಿದ್ಯುತ್‌ನ್ನು ಎಲ್ಲಾ ವಿತರಣಾ ಕಂಪನಿಗಳಿಗೆ ಶೇಕಡಾವಾರು ಹಂಚಿಕೆಯನ್ನು ನೀಡಬೇಕಾಗಿರುತ್ತದೆ. ಮೇಲೆ ಓದಲಾದ (2)ರ ಆದೇಶದಂತೆ ಹಾಲಿ ಸಾಂಪ್ರದಾಯಕ ವಿದ್ಯುತ್‌ನ್ನು ಈ ಕೆಳಕಂಡ ಅನುಪಾತದಲ್ಲಿ ಹಂಚಿಕೆಯಾಗಿದೆ.

| ವಿತರಣಾ ಕಂಪನಿ | ಶೇಕಡವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 47.88 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.46 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 19.35 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.72 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.59 |
| **ಒಟ್ಟು** | **100.00** |

ಇದೇ ಅನುಪಾತದಲ್ಲಿ ಸಂಯೋಜಿತ 70 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್‌ನ್ನು ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಲು ಈ ಕೆಳಗಿನ ಆದೇಶ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 70 ವಿಎಸ್‌ಸಿ 2013, ಬೆಂಗಳೂರು ದಿನಾಂಕ : 02–01–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜವಾಹರಲಾಲ್ ನೆಹರು ನ್ಯಾಶನಲ್ ಸೋಲಾರ್ ಮಿಷನ್ ಕಾರ್ಯಕ್ರಮದಲ್ಲಿ ಎನ್.ಟಿ.ಪಿ.ಸಿ.–ವಿವಿಎನ್ಎಲ್ (ರಾಷ್ಟ್ರೀಯ ಶಾಖೋತ್ಪನ್ನ ವಿದ್ಯುತ್ ನಿಗಮ ನಿಯಮಿತ–ವಿದ್ಯುತ್ ವ್ಯಾಪಾರ ನಿಗಮ)ದಿಂದ ರಾಜ್ಯಕ್ಕೆ ಹಂಚಿಕೆಯಾಗಿರುವ ಸಂಯೋಜಿತ ಸೌರ ವಿದ್ಯುತ್‌ನ್ನು ವಿದ್ಯುತ್ ವಿತರಣಾ ಕಂಪನಿಗಳಿಗೆ ಈ ಕೆಳಕಂಡ ಅನುಪಾತದಂತೆ, ವಿದ್ಯುತ್ ಪ್ರಮಾಣವನ್ನು ಈ ಆದೇಶದಲ್ಲಿ ತಿಳಿಸಿರುವ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿರುತ್ತದೆ.

| ವಿತರಣಾ ಕಂಪನಿ | ಶೇಕಡವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 47.88 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.46 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 19.35 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.72 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.59 |
| **ಒಟ್ಟು** | **100.00** |

**ನಿಬಂಧನೆಗಳು :**

1. ಈ ಆದೇಶವು ದಿನಾಂಕ : 01–06–2012 ರಿಂದ ಘಟನೋತ್ತರವಾಗಿ ಜಾರಿಗೆ ಬರಲಿದೆ ಹಾಗೂ ಮುಂದಿನ ಆದೇಶದವರೆಗೂ ಜಾರಿಯಲ್ಲಿರುತ್ತದೆ.
2. ಈ ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವು ಕೇಂದ್ರ ಸರ್ಕಾರ/ಎನ್.ಟಿ.ಪಿ.ಸಿ.–ವಿವಿಎನ್ಎಲ್ ನಿಂದ ಸಂಯೋಜಿತ ಸೌರ ವಿದ್ಯುತ್ (ಸೌರ ವಿದ್ಯುತ್‌ನ್ನು ಶಾಖೋತ್ಪನ್ನ ವಿದ್ಯುತ್‌ನೊಂದಿಗೆ ಸೇರಿಸಿ) ಯೋಜನೆಗಳಿಂದ ಬರುವ ವಿದ್ಯುತ್ ಪ್ರಮಾಣಕ್ಕೆ ಮಾತ್ರ ಅನ್ವಯಿಸುತ್ತದೆ.
3. ಈ ಶೇಕಡಾವಾರು ಹಂಚಿಕೆ ಪ್ರಮಾಣವನ್ನು ಅನುಸರಿಸಿ ಎನ್.ಟಿ.ಪಿ.ಸಿ.–ವಿವಿಎನ್ಎಲ್ ನಿಂದ ಸಂಯೋಜಿತ ಸೌರ ವಿದ್ಯುತ್ ಯೋಜನೆಗಳಿಂದ ಬರುವ ವಿದ್ಯುತ್ ಪ್ರಮಾಣಕ್ಕೆ ಎನ್.ಟಿ.ಪಿ.ಸಿ.–ವಿವಿಎನ್ಎಲ್ ರವರೊಂದಿಗೆ ವಿದ್ಯುತ್ ವಿತರಣಾ ಕಂಪನಿಗಳು ಖರೀದಿ ಒಡಂಬಡಿಕೆ ಮಾಡಿಕೊಳ್ಳುವುದು ಹಾಗೂ ಇದಕ್ಕೆ ಅನ್ವಯಿಸುವ ಎನ್.ಟಿ.ಪಿ.ಸಿ–ವಿವಿಎನ್ಎಲ್ ರವರ ನಿಬಂಧನೆಗಳನ್ನು ಪಾಲಿಸುವುದು.
4. ಈ ಆದೇಶದಂತೆ ವಿತರಣಾ ಕಂಪನಿವಾರು ಹಂಚಿಕೆ ಮಾಡಲಾದ ವಿದ್ಯುತ್ ಪ್ರಮಾಣವನ್ನು ತಪ್ಪದೇ ಪಾಲಿಸುವುದು ಮತ್ತು ಈ ಹಂಚಿಕೆಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 146**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ** : ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧಿಕೃತ ಉಪಯೋಗಕ್ಕಾಗಿ ಹೊಸ ವಾಹನವನ್ನು ಖರೀದಿಸುವ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 111 ಶಿವಾನೀ 2011, ದಿನಾಂಕ : 09-05-2013.

2. ಇದೇ ಸಮ ಸಂಖ್ಯೆಯ ಸರ್ಕಾರದ ಆದೇಶ ದಿನಾಂಕ : 08-10-2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು/ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಹೊಸ ವಾಹನ ಖರೀದಿಸಲು ಇರುವ ಆರ್ಥಿಕ ಮಿತಿಯನ್ನು ಪರಿಷ್ಕರಿಸಿ ಗರಿಷ್ಠ ರೂ. 9.00 ಲಕ್ಷ (ತೆರಿಗೆ ಹೊರತುಪಡಿಸಿ) ಗಳಿಗೆ ನಿಗಧಿ ಪಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ, ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧಿಕೃತ ಉಪಯೋಗಕ್ಕಾಗಿ M/s Magnum Honda ಕಂಪನಿಯ Honda City VMT ಮಾದರಿಯ ವಾಹನವನ್ನು ಖರೀದಿಸಿದ್ದು, ಈ ವಾಹನಕ್ಕೆ ಅಧಿಕವಾಗಿ ಅವಶ್ಯವಿರುವ (Extra fitting) ವಸ್ತುಗಳನ್ನು ಅಳವಡಿಸಲಾಗಿದೆ. ಅದರ ಮೊತ್ತವು ರೂ. 64,709/- (ಅರವತ್ತು ಸಾವಿರದ ಏಳುನೂರ ಒಂಬತ್ತು ರೂಪಾಯಿಗಳು ಮಾತ್ರ) ಗಳಾಗಿರುತ್ತದೆ. ಆ ಅಳವಡಿಕೆಗಳನ್ನು M/s Hindustan Garage ರವರಿಂದ ಮಾಡಿಸಲಾಗಿದ್ದು, ಅದರಂತೆ, ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 246 ಸಮನ್ವಯ 2013, ಬೆಂಗಳೂರು ದಿನಾಂಕ : 02-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧಿಕೃತ ಉಪಯೋಗಕ್ಕಾಗಿ M/s Magnum Honda ಕಂಪನಿಯಿಂದ ಖರೀದಿಸಿರುವ ಹೊಸ Honda City VMT ಮಾದರಿಯ ಈ ವಾಹನಕ್ಕೆ ಅಧಿಕವಾಗಿ ಅವಶ್ಯವಿರುವ (Extra fittings) ವಸ್ತುಗಳನ್ನು ಅಳವಡಿಸಿದ ಬಾಬ್ತು ರೂ. 64,709/- (ತೆರಿಗೆಗಳು ಸೇರಿ) (ಅರವತ್ತು ಸಾವಿರದ ಏಳುನೂರ ಒಂಬತ್ತು ರೂಪಾಯಿಗಳು ಮಾತ್ರ) ಗಳನ್ನು M/s Hindustan Garage ರವರಿಗೆ ಸಂದಾಯ ಮಾಡಲು ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052-00-090-0-01-195 ಸಾರಿಗೆ ವೆಚ್ಚ (ಯೋಜನೇತರ) ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 790 ವೆಚ್ಚ-12/2013, ದಿನಾಂಕ : 07-09-2013ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 147

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರಾದ ಡಾ॥ ಆಯಿ ವಾಮನ ಆಚಾರ್ಯ ಇವರಿಗೆ ಸಂಬಂಧಪಟ್ಟಂತೆ ಪರಿಷ್ಕೃತ ಷರತ್ತು ಮತ್ತು ನಿಬಂಧನೆಗಳು ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ ಅಪಜೀ 123 ಇಪಿಸಿ 2012, ದಿನಾಂಕ: 18-09-2012.

2. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 177 ಶಿಸನೇ 2012, ದಿನಾಂಕ: 26-10-2012.

3. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 102 ಶಿಸನೇ 2011, ದಿನಾಂಕ: 23-01-2012.

4. ಸರ್ಕಾರದ ಆದೇಶ ಸಂಖ್ಯೆ ಅಪಜೀ 123 ಇಪಿಸಿ 2012, ದಿನಾಂಕ: 22-11-2012.

5. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 123 ಶಿಸನೇ 2013, ದಿನಾಂಕ: 02-08-2013.

6. ಸರ್ಕಾರದ ಅಧಿಸೂಚನೆ ಸಂಖ್ಯೆ ಅಪಜೀ 123 ಇಪಿಸಿ 2012 (ಭಾಗ-4), ದಿನಾಂಕ: 12-08-2013.

7. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ (ಬಿಪಿಇ) 62 ಎಸ್‌ಪಿಯು 1998, ದಿನಾಂಕ: 16-01-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಡಾ॥ ಆಯಿ ವಾಮನ ಆಚಾರ್ಯ ಇವರನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ ಅವರಿಗೆ ಸಂಪುಟ ದರ್ಜೆ ಸ್ಥಾನಮಾನವನ್ನು ನೀಡಲಾಗಿತ್ತು. ಮೇಲೆ ಓದಲಾದ (3)ರಲ್ಲಿ ಅವರಿಗೆ ಷರತ್ತು ನಿಬಂಧನೆಗಳನ್ನು ಸೂಚಿಸಿದ್ದು, ಮೇಲೆ ಓದಲಾದ (4)ರ ಆದೇಶದಲ್ಲಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲಾಗಿತ್ತು. ಮೇಲೆ ಓದಲಾದ (5)ರ ಅಧಿಸೂಚನೆಯಲ್ಲಿ ಅವರಿಗೆ ನೀಡಿದ್ದ ಸಂಪುಟ ದರ್ಜೆ ಸ್ಥಾನಮಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದೆ ಪಡೆಯಲಾಗಿದ್ದು, ಮೇಲೆ ಓದಲಾದ (6)ರ ಅಧಿಸೂಚನೆಯಲ್ಲಿ ಮಾರ್ಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ತಿಳಿಸಲಾಗಿತ್ತು.

ಉಲ್ಲೇಖ (7)ರ ಸರ್ಕಾರಿ ಆದೇಶದಲ್ಲಿ ಸಚಿವರ ಸ್ಥಾನಮಾನವನ್ನು ನೀಡದ ಮಂಡಳಿ, ನಿಗಮ ಹಾಗೂ ಸ್ವಾಯತ್ತ ಸಂಸ್ಥೆಗಳ ಅಧಿಕಾರೇತರ ಅಧ್ಯಕ್ಷರಿಗೆ ನೀಡಬಹುದಾದ ಸಂಭಾವನೆ, ಭತ್ಯೆ ಮತ್ತು ಇತರೆ ಸವಲತ್ತುಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಸದರಿ ಆದೇಶದನ್ವಯ ಭತ್ಯೆ ಮತ್ತು ಸವಲತ್ತುಗಳನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರಿಗೆ ನಿಗಧಿಪಡಿಸುವ ಬಗ್ಗೆ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 123 ಇಪಿಸಿ 2012 (ಭಾ–4) ಬೆಂಗಳೂರು, ದಿನಾಂಕ : 28–01–2014**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಜಲ (ಮಾಲಿನ್ಯ ನಿವಾರಣೆ ಹಾಗೂ ನಿಯಂತ್ರಣ) ಕಾಯ್ದೆ 1974ರ ಕಲಂ 5(9) ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ (ವಿಷಯ ನಿರ್ವಹಣೆ ಕಾರ್ಯವಿಧಾನ) ನಿಯಮಗಳು ಹಾಗೂ ಜಲ (ಮಾಲಿನ್ಯ ನಿವಾರಣೆ ಹಾಗೂ ನಿಯಂತ್ರಣ) ನಿಯಮಗಳು, 1976ರಲ್ಲಿ ಓದಿಕೊಂಡಂತೆ – ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಅಧ್ಯಕ್ಷರ ಹುದ್ದೆಗೆ ನೇಮಕಗೊಂಡ ಡಾ॥ ಆಯಿ ವಾಮನ ಆಚಾರ್ಯರವರಿಗೆ ಪರಿಷ್ಕೃತ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

**1. ಸಂಭಾವನೆ :**

ಮಾಸಿಕ ₹ 9,000/–

**2. ಮನೆ ಬಾಡಿಗೆ ಭತ್ಯೆ :**

ಅಧ್ಯಕ್ಷರು ಸ್ವಂತ ಮನೆಯಲ್ಲಿ ವಾಸಿಸುತ್ತಿದ್ದರೆ ₹ 4,500/– ಪಡೆಯಬಹುದು. ಸ್ವಂತ ಮನೆಯಿಲ್ಲದ ಪಕ್ಷದಲ್ಲಿ ಕೇಂದ್ರ ಸ್ಥಾನದಲ್ಲಿ ಮನೆಯನ್ನು ಬಾಡಿಗೆಗೆ ಪಡೆಯಬಹುದು. ಅಂತಹ ಬಾಡಿಗೆಯ ಮನೆಗೆ ಬೆಂಗಳೂರು ನಗರದಲ್ಲಿ ಮಾಸಿಕ ₹ 15,000/– ಅಥವಾ ಇತರೆ ನಗರಗಳಲ್ಲಿ ₹ 10,000/– ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

**3. ಪೀಠೋಪಕರಣಗಳು :**

ಅಧ್ಯಕ್ಷರು ಪರದೆ ಮತ್ತು ನೆಲಹಾಸುಗಳನ್ನು ಮಾತ್ರ ₹ 20,000/–ಕ್ಕೆ ಮೀರದಂತೆ ಒಂದು ಬಾರಿಗೆ ಮಾತ್ರ ಅನ್ವಯಿಸುವಂತೆ ಖರೀದಿಸಬಹುದು. ಅವರ ಅಧಿಕಾರದ ಅವಧಿ ಮುಗಿದ ಕೂಡಲೇ ಮಂಡಳಿಗೆ ಹಿಂತಿರುಗಿಸತಕ್ಕದ್ದು.

**4. ವಾಹನ ಸೌಕರ್ಯ :**

₹ 6,50,000/– (ಆರು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಮೀರದಂತೆ ಚಾಲಕನ ಸಮೇತ ವಾಹನ ಪಡೆಯಲು ಅರ್ಹರಿರುತ್ತಾರೆ. ಕೆಂಪು ಅಥವಾ ಇತರೆ ಯಾವುದೇ ಬಣ್ಣದ ದೀಪವನ್ನು ವಾಹನದ ಮೇಲೆ ಬಳಸುವಂತಿಲ್ಲ. 300 ಲೀಟರ್ ಇಂಧನಕ್ಕೆ ಸಮನಾದ ಭತ್ಯೆಯನ್ನು ಕೇಂದ್ರ ಸ್ಥಾನದಲ್ಲಿ ಮಾಸಿಕವಾಗಿ ಪಡೆಯಲು ಅಧ್ಯಕ್ಷರು ಅರ್ಹರಿರುತ್ತಾರೆ. ಮಂಡಳಿಯಲ್ಲಿ ಒಂದು ವೇಳೆ ಚಾಲಕರು ದೊರೆಯದಿದ್ದ ಪಕ್ಷದಲ್ಲಿ ಬೇರೆ ಸಂಸ್ಥೆ/ನಿಗಮ/ಮಂಡಳಿ ಸರ್ಕಾರದ ಇಲಾಖೆಯಿಂದ ನಿಯೋಜನೆ ಮೇಲೆ ಪಡೆಯಬಹುದು. ಅದು ಸಾಧ್ಯವಾಗದಿದ್ದಲ್ಲಿ ಮಂಡಳಿಯಲ್ಲಿ ಚಾಲಕರು ಪಡೆಯುವ ಮೂಲ ವೇತನಕ್ಕಿಂತ ₹ 10/– ಕಡಿಮೆ ಇರುವಂತೆ ಗುತ್ತಿಗೆ ಆಧಾರದ ಮೇಲೆ ಚಾಲಕನನ್ನು ನೇಮಿಸಿಕೊಳ್ಳಬಹುದು. ಅಂತಹ ನೇಮಕಾತಿಯು ಹಾಲಿ ಅಧ್ಯಕ್ಷರ ಅಧಿಕಾರ ಅವಧಿಗೆ ಮಾತ್ರ ಜಾರಿಯಲ್ಲಿರುತ್ತದೆ. ಸಂಸ್ಥೆ/ನಿಗಮ/ಮಂಡಳಿಗಳ ಮುಖ್ಯ ಕಾರ್ಯಾಧಿಕಾರಿಗೆ ಅನ್ವಯಿಸುವ ಎಲ್ಲಾ ನಿಬಂಧನೆಗಳು ಅಧ್ಯಕ್ಷರಿಗೂ ಸಹ ಅನ್ವಯವಾಗುತ್ತವೆ.

**5. ಆಪ್ತ ಸಿಬ್ಬಂದಿ :**

ಮಂಡಳಿಯಿಂದ ಲಭ್ಯವಿರುವ ಒಬ್ಬ ಆಪ್ತ ಸಹಾಯಕ ಮತ್ತು ಒಬ್ಬ ದಲಾಯತ್‌ನ್ನು ಹೊಂದಬಹುದು. ಮಂಡಳಿಯಲ್ಲಿ ಒಂದು ವೇಳೆ ಅಂತಹ ಸಿಬ್ಬಂದಿ ದೊರೆಯದಿದ್ದ ಪಕ್ಷದಲ್ಲಿ ಬೇರೆ ಸಂಸ್ಥೆ/ನಿಗಮ/ಮಂಡಳಿ ಸರ್ಕಾರದ ಇಲಾಖೆಯಿಂದ ನಿಯೋಜನೆ ಮೇಲೆ ಪಡೆಯಬಹುದು. ಅಂತಹ ನೇಮಕಾತಿಯು ಹಾಲಿ ಅಧ್ಯಕ್ಷರ ಅಧಿಕಾರ ಅವಧಿಗೆ ಮಾತ್ರ ಜಾರಿಯಲ್ಲಿರುತ್ತದೆ.

**6. ದೂರವಾಣಿ :**

ಅಧಿಕೃತ ಉಪಯೋಗಕ್ಕಾಗಿ ಒಂದು ನಿವಾಸ ದೂರವಾಣಿಯನ್ನು ಅವರ ಸ್ವಂತ ಗೃಹದಲ್ಲಿ ಅಥವಾ ಬಾಡಿಗೆ ಮೇಲೆ ಪಡೆದ ನಿವಾಸದಲ್ಲಿ ಒದಗಿಸತಕ್ಕದ್ದು. ಒಂದು ವೇಳೆ ಅವರು ಮನೆಯಲ್ಲಿ ಸ್ಥಿರ ದೂರವಾಣಿಯನ್ನು ಈಗಾಗಲೇ ಹೊಂದಿದ್ದಲ್ಲಿ, ಅವರ ಅಧಿಕಾರ ಅವಧಿಯಲ್ಲಿ ಸದರಿ ದೂರವಾಣಿಯ ಬಾಡಿಗೆ ಮತ್ತು ಕರೆ ದರಗಳನ್ನು ಮಂಡಳಿಯೇ ಭರಿಸತಕ್ಕದ್ದು. ಹಾಗೆ ಮಂಡಳಿಯು ಅಧಿಕೃತ ಉಪಯೋಗಕ್ಕಾಗಿ ಭರಿಸಿದ ವೆಚ್ಚದ ಬಗ್ಗೆ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು.

**7. ಪ್ರವಾಸ ಭತ್ಯೆ ಮತ್ತು ದಿನ ಭತ್ಯೆ :**

ಪ್ರವಾಸ ಭತ್ಯೆ ಮತ್ತು ದಿನ ಭತ್ಯೆಗೆ ಸಂಬಂಧಿಸಿದಂತೆ ಸಂಸ್ಥೆ/ನಿಗಮ/ಮಂಡಳಿಗಳ ಮುಖ್ಯ ಕಾರ್ಯಾಧಿಕಾರಿಗೆ ಅನ್ವಯಿಸುವ ಎಲ್ಲಾ ನಿಬಂಧನೆಗಳು ಅಧ್ಯಕ್ಷರಿಗೂ ಸಹ ಅನ್ವಯಿಸುವ ದಿನಭತ್ಯೆ ನಿಯಮಗಳೇ ಮಂಡಳಿಯ ಅಧ್ಯಕ್ಷರಿಗೂ ಸಹ ಅನ್ವಯಿಸತಕ್ಕದ್ದು. ಪರ ರಾಜ್ಯಗಳ ಪ್ರವಾಸವನ್ನು ಒಳಗೊಂಡಂತೆ ಮಾಸಿಕ ಪ್ರವಾಸದ ಅವಧಿಯು 10 ದಿನಗಳಿಗೆ ಮೀರತಕ್ಕದ್ದಲ್ಲ. ರಾಜ್ಯದ ಹೊರಗಡೆ ಪ್ರವಾಸವನ್ನು ಅವಶ್ಯವಿದ್ದಲ್ಲಿ ಮಾತ್ರ ಕೈಗೊಳ್ಳತಕ್ಕದ್ದು ಹಾಗೂ ತಿಂಗಳಲ್ಲಿ ಒಂದು ಬಾರಿಗಿಂತ ಹೆಚ್ಚಾಗಿ ಕೈಗೊಳ್ಳತಕ್ಕದ್ದಲ್ಲ.

ಈ ಆದೇಶವು ಮಂಡಳಿಯ ಅಧ್ಯಕ್ಷರ ಸಂಪುಟ ದರ್ಜೆ ಸ್ಥಾನಮಾನವನ್ನು ಹಿಂದಕ್ಕೆ ಪಡೆದ ದಿನಾಂಕದಿಂದ ಜಾರಿಗೆ ಬರುತ್ತದೆ.

ಈ ಆದೇಶದನ್ವಯ ಮಂಡಳಿಯ ಅಧ್ಯಕ್ಷರಿಗೆ ನೀಡಬೇಕಾದ ಎಲ್ಲಾ ಸವಲತ್ತುಗಳನ್ನು ಮಂಡಳಿಯೇ ನೀಡತಕ್ಕದ್ದು ಹಾಗೂ ಎಲ್ಲಾ ವೆಚ್ಚಗಳನ್ನು ಮಂಡಳಿಯ ಆಯವ್ಯಯದಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಹೆಚ್.ಅನುಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ),

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR. 148**

**SC-250**

**FOREST, ECOLOGY AND ENVIRONMENT SECRETARIAT**

**Sub :-** Refresher course Integrated Coastal Zone Management and CZMP on 28th - 31st October, 2013 at Mangalore - reg

**Ref :-** Dr.A.B.Harapanahalli, National Project Director, SICM, MoEF letter dated: 10.09.2013

**PREAMBLE :-**

For implementation of the new integrated management approach and policy framework for implementation of Coastal Regulation Zone Notification, 2011 for the Indian coastal areas, College of Fisheries, Mangalore on behalf of Society of Integrated Coastal Management, Ministry of Environment and Forests (MoEF) organised a Refresher course on Integrated Coastal Zone Management and CZMP from 28th – 31st October, 2013 at Mangalore.

The Government decided to send Sri.K.E.Nagaraja, Regional Director (Environment) Mangalore and Sri. Ashok bhat, .Regional Director (Environment) (I/c) Assistant Director of Fisheries, Regional Director (Environment) Office, Udupi and to attend the workshop on behalf of Government of Karnataka and Karnataka State Coastal Zone Management Authority.

Hence, the order.

**GOVERNMENT ORDER NO: FEE 34 ENG 2013 BANGALORE, DATED: 22.10.2013**

In view of the facts traversed in the preamble, the Government is pleased to accord approval for the visit to the refresher course programme on **Integrated Coastal Zone Management and CZMP** from 28th – 31st October, 2013 at College of Fisheries, Mangalore by Sri.K.E.Nagaraja, Regional Director (Environment) Mangalore and **Sri. Ashok bhat,** Regional Director (Environment) (I/c) Assistant Director of Fisheries, Regional Director (Environment) Office, Udupi.

These officers are entitled to avail travel fare upto 2nd tier AC and accommodation by the organiser and DA as per government norms.

These orders are issued in exercise of the financial powers delegated to Secretary to Government to Administrative Departments vide G.O.No.FD 1 TFP 96 dated 10.7.1996 and FD 1 TFP 2003, dated: 12.06.2003.

By Order and in the name of the Governor of Karnataka,
**G.H.Anasuyamma,**
Under Secretary to Government,
(Ecology and Environment)
Forest, Ecology and Environment Department

**PR. 149**

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 27-05-2013.

2. ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 28-05-2013.

3. ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 10-07-2013.

4. ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 26-12-2013.

5. ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ದಿನಾಂಕ: 07-01-2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಿಂದ (5)ರ ಸರ್ಕಾರಿ ಆದೇಶಗಳಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಪಡಿಸುವ ಸಲುವಾಗಿ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡಿ ಆದೇಶಿಸಲಾಗಿತ್ತು.

ಪ್ರಸ್ತುತ ಡಾ॥ ಹೆಚ್.ಸಿ.ಮಹದೇವಪ್ಪ, ಮಾನ್ಯ ಲೋಕೋಪಯೋಗಿ ಸಚಿವರು, ಇವರನ್ನು ಕೊಡಗು ಮತ್ತು ಹಾಸನ ಜಿಲ್ಲೆಗಳ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಿಸಲಾಗಿತ್ತು. ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಗೃಹ ಸಚಿವರು, ಇವರನ್ನು ಕೊಡಗು ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಿಸಲು ಸರ್ಕಾರವು ನಿರ್ಧರಿಸಿ ಅದರಂತೆ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 44 ಯೋವಿವಿ 2013, ಬೆಂಗಳೂರು, ದಿನಾಂಕ: 16-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಗೃಹ ಸಚಿವರು, ಇವರನ್ನು ಕೊಡಗು ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**P.R. 151**

**S.C. 100**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2013–14ನೇ ಸಾಲಿನ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 17 ಮಪ್ರಮಂ 2013, ದಿನಾಂಕ: 12–06–2013.

2. ಸರ್ಕಾರಿ ಆದೇಶ ಸಂಖ್ಯೆ: ಯೋಇ 17 ಮಪ್ರಮಂ 2013, ದಿನಾಂಕ: 18–11–2013.

**ಪ್ರಸ್ತಾವನೆ :**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2013–14ನೇ ಸಾಲಿನಲ್ಲಿ ರೂ.3430.00 ಲಕ್ಷಗಳನ್ನು ಆಯವ್ಯಯದಲ್ಲಿ ನಿಗಧಿಪಡಿಸಲಾಗಿದ್ದು, ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಪ್ರಥಮ ಕಂತಿನ ಮೊತ್ತವಾಗಿ ರೂ.925.00 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಲಾಗಿದೆ. ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಎರಡನೇ ಕಂತಿನ ಮೊತ್ತವಾಗಿ ರೂ.790.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಪ್ರಸ್ತುತ ಮೂರನೆಯ ಕಂತಿನ ಅನುದಾನವನ್ನು ಬಿಡುಗಡೆ ಮಾಡಲು ಉದ್ದೇಶಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 17 ಮಪ್ರಮಂ 2013, ಬೆಂಗಳೂರು, ದಿನಾಂಕ: 16–01–2014.**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2013–14ನೇ ಸಾಲಿನ ಮೂರನೇ ಕಂತಿನ ಅನುದಾನವಾಗಿ ರೂ.857.50 ಲಕ್ಷ (ಎಂಟು ನೂರ ಐವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿದೆ.

| ಕ್ರ. ಸಂ. | ಲೆಕ್ಕಶೀರ್ಷಿಕೆ (ಯೋಜನೆ) | ಮೊದಲನೇ ಹಾಗೂ ಎರಡನೇ ಕಂತಿನ ಅನುದಾನ ಕಂತು | ಪ್ರಸ್ತುತ ಬಿಡುಗಡೆ ಮಾಡುತ್ತಿರುವ ಮೂರನೇ ಕಂತು | ಒಟ್ಟು ಈವರೆಗೆ ಬಿಡುಗಡೆಗೊಳಿಸಿದ ಅನುದಾನ |
|---|---|---|---|---|
| 1 | 2515–00–103–0–02–101 (ಸಹಾಯಾನುದಾನ) | 50.00 | **25.00** | 75.00 |
| 2 | 2515–00–103–0–02–132 (ಬಡವಾಳ ವೆಚ್ಚ) | 944.00 | **472.00** | 1416.00 |
| 3 | 2515–00–103–0–02–422 (ವಿಶೇಷ ಘಟಕ ಯೋಜನೆ) | 527.50 | **263.75** | 791.25 |
| 4 | 2515–00–103–0–02–423 (ಗಿರಿಜನ ಉಪ ಯೋಜನೆ) | 193.50 | **96.75** | 290.25 |
| | **ಒಟ್ಟು** | 1715.00 | **857.50** | 2572.50 |

ಬಿಡುಗಡೆಯಾದ ಈ ಮೊತ್ತವನ್ನು ಮಂಡಳಿಯ ಕಾರ್ಯದರ್ಶಿಯವರ ವೈಯಕ್ತಿಕ ಖಾತೆಗೆ ಜಮೆ ಮಾಡಿ, ನಂತರ ಅವಶ್ಯಕತೆಗನುಗುಣವಾಗಿ ಖರ್ಚು ಮಾಡತಕ್ಕದ್ದು ಮತ್ತು ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2013, ದಿನಾಂಕ:16–11–2013ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

P.R. 152

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011"ರ ಪರಿಣಾಮಕಾರಿ ಅನುಷ್ಠಾನಕ್ಕೆ "ಸಕಾಲ ಮಿಷನ್"ಗೆ ಹೆಚ್ಚುವರಿ ಸಿಬ್ಬಂದಿಗಳನ್ನು ಸೃಜನೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 28 ಇಕಾಅ 2012, ದಿನಾಂಕ: 28–03–2012.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 119 ನಾಸೇಖಾ 2012, ದಿನಾಂಕ: 29–11–2012.

3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 812/686 ವೆಚ್ಚ–12/2013, ದಿನಾಂಕ: 18–11–2013.

4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 184 ನಾಸೇಖಾ 2013, ದಿನಾಂಕ: 28–11–2012.

5. ಟಿಪ್ಪಣಿ ಸಂಖ್ಯೆ: ಸಿಆಸುಇ 184 ನಾಸೇಖಾ 2013, ದಿನಾಂಕ: 13–12–2013.

6. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1146 ವೆಚ್ಚ–12/2013, ದಿನಾಂಕ: 09–01–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು 11 ಇಲಾಖೆಗಳ ಮುಖಾಂತರ 151 ಕಾಲಮಿತಿ ಸೇವೆಗಳನ್ನು ಕರ್ನಾಟಕ ನಾಗರೀಕರಿಗೆ ಒದಗಿಸಲು ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ಅನ್ನು ದಿನಾಂಕ: 02–04–2012ರಿಂದ ರಾಜ್ಯಾದ್ಯಂತ ಅನುಷ್ಠಾನಗೊಳಿಸಲಾಗಿದೆ.

ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011" ರ ಸಂಬಂಧ ಸರ್ಕಾರದ ಕ್ರಮಾಂಕ: ಸಿಆಸುಇ 119 ನಾಸೇಖಾ 2012, ದಿನಾಂಕ:26–10–2012ರ ಅಧಿಸೂಚನೆ–1ರ ತಿದ್ದುಪಡಿ ಅಧಿಸೂಚನೆಯಲ್ಲಿ 93 ಹೆಚ್ಚುವರಿ ಸೇವೆಗಳನ್ನು ಹಾಗೂ ಸಿಬ್ಬಂದಿ ಕಲ್ಯಾಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 21 ಸೇವೆಗಳನ್ನು ದಿನಾಂಕ: 3ನೇ ಡಿಸೆಂಬರ್ 2012 ರಿಂದ ರಾಜ್ಯದಾದ್ಯಂತ ಜಾರಿಗೆ ಬರುವಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಮುಂದುವರೆದು, "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011"ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ರಾಜ್ಯಾದ್ಯಂತ ಸರ್ಕಾರದ 46 ಇಲಾಖೆ/ಸಂಸ್ಥೆಗಳ 447 ಸೇವೆಗಳನ್ನು ಸಕಾಲದಡಿಯಲ್ಲಿ ತರಲಾಗಿದೆ.

ಮೇಲೆ ಓದಲಾದ (3)ರ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಸಕಾಲ ಮಿಷನ್‌ಗೆ 04 ಹುದ್ದೆಗಳನ್ನು ಸೃಜಿಸಲು ಸಹಮತಿಸಿರುತ್ತದೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಸಕಾಲ ಮಿಷನ್‌ಗೆ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (5)ರ ಟಿಪ್ಪಣಿಯಲ್ಲಿ ಸಕಾಲ ಮಿಷನ್ ಮೊದಲಿಗೆ 151 ಸೇವೆಗಳಿಂದ ಪ್ರಾರಂಭಿಸಿ, 447 ಸೇವೆಗಳ ನಿರ್ವಹಣೆ ಮಾಡುವುದಕ್ಕೆ ಒಬ್ಬ ನಿರ್ವಹಣಾ ಸಮಾಲೋಚಕರು ಮತ್ತು ಒಬ್ಬ ಮಾಹಿತಿ ತಂತ್ರಜ್ಞಾನ ಸಮಾಲೋಚಕರಿಂದ ಕಾರ್ಯನಿರ್ವಹಿಸುವುದು ಕಷ್ಟಸಾಧ್ಯವಾದ್ದರಿಂದ ಕನಿಷ್ಠ ಒಬ್ಬ ಮಾಹಿತಿ ತಂತ್ರಜ್ಞಾನ ಸಮಾಲೋಚಕರ ಹಾಗೂ ಒಬ್ಬ ನಿರ್ವಹಣಾ ಸಮಾಲೋಚಕರ ಹುದ್ದೆಗಳನ್ನು ಮತ್ತು ಇಬ್ಬರು ಪ್ರೋಗ್ರಾಮರ್‌ಗಳ ಹುದ್ದೆಗಳನ್ನು (ಡಾಟಾ ಎಂಟ್ರಿ ಆಪರೇಟರ್ ಹುದ್ದೆಗಳಿಗೆ ಬದಲಾಗಿ) ಮಂಜೂರು ಮಾಡಲು ಆರ್ಥಿಕ ಇಲಾಖೆಯನ್ನು ಕೋರಲಾಗಿತ್ತು.

ಮೇಲೆ ಓದಲಾದ (6)ರ ಟಿಪ್ಪಣಿಯಲ್ಲಿ ಈ ಕೆಳಕಂಡ 04 ಹುದ್ದೆಗಳನ್ನು ಸೃಜಿಸಲು ಆರ್ಥಿಕ ಇಲಾಖೆಯು ಸಹಮತಿಸಿರುತ್ತದೆ.

| ಕ್ರ. ಸಂ. | ಹುದ್ದೆಗಳು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಷರಾ |
|---|---|---|---|---|
| 1 | ನಿರ್ವಹಣಾ ಸಮಾಲೋಚಕರು | 01 | ಗುತ್ತಿಗೆ ಆಧಾರ | – |
| 2 | ರಾಜ್ಯ ಮಾಹಿತಿ ತಂತ್ರಜ್ಞಾನ ಸಮಾಲೋಚಕರು | 01 | ಗುತ್ತಿಗೆ ಆಧಾರ | – |
| 3 | ಪ್ರೋಗ್ರಾಮರ್ | 02 | ಹೊರಗುತ್ತಿಗೆ | ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 812/686 ವೆಚ್ಚ–12, ದಿನಾಂಕ: 18–11–2013ರಲ್ಲಿ ಸೃಜಿಸಲು ಸಹಮತಿಸಲಾಗಿದ್ದ 02 ಡಾಟಾ ಎಂಟ್ರಿ ಆಪರೇಟರ್ ಹುದ್ದೆಗಳ ಬದಲು. |
| | **ಒಟ್ಟು** | **04** | – | – |

ಆದುದರಿಂದ ಈ ಕೆಳಕಂಡ ಆದೇಶ :–

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 184 ನಾಸೇಖಾ 2013, ಬೆಂಗಳೂರು, ದಿನಾಂಕ: 23–01–2014.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011"ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ "ಸಕಾಲ ಮಿಷನ್"ಗೆ ಈ ಕೆಳಕಂಡಂತೆ ಹೆಚ್ಚುವರಿ ಸಿಬ್ಬಂದಿಯವರನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಗಳು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಷರಾ |
|---|---|---|---|---|
| 1 | ನಿರ್ವಹಣಾ ಸಮಾಲೋಚಕರು | 01 | ಗುತ್ತಿಗೆ ಆಧಾರ | – |
| 2 | ರಾಜ್ಯ ಮಾಹಿತಿ ತಂತ್ರಜ್ಞಾನ ಸಮಾಲೋಚಕರು | 01 | ಗುತ್ತಿಗೆ ಆಧಾರ | – |
| 3 | ಪ್ರೋಗ್ರಾಮರ್ | 02 | ಹೊರಗುತ್ತಿಗೆ | ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 812/686 ವೆಚ್ಚ–12, ದಿನಾಂಕ: 18–11–2013ರಲ್ಲಿ ಸೃಜಿಸಲು ಸಹಮತಿಸಲಾಗಿದ್ದ 02 ಡಾಟಾ ಎಂಟ್ರಿ ಆಪರೇಟರ್ ಹುದ್ದೆಗಳ ಬದಲು. |
| | **ಒಟ್ಟು** | **04** | – | – |

ಈ ವೆಚ್ಚವನ್ನು 2013–14ನೇ ಸಾಲಿಗೆ ಲೆಕ್ಕಶೀರ್ಷಿಕೆ "2052–00–090–0–26–051" (ಯೋಜನೇತರ) "ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011"ರ ಅನುಷ್ಠಾನದಡಿ ಭರಿಸುವುದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1146 ವೆಚ್ಚ–12/2013, ದಿನಾಂಕ: 09–01–2014ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್.ವರಪ್ರಸಾದ್ ರೆಡ್ಡಿ,**
ಆಡಳಿತಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ–ನಾಗರೀಕ ಸೇವೆಗಳು).

**P.R. 153**

**S.C. 2000**

## ಒಳಾಡಳಿತ ಸಚಿವಾಲಯ

**ವಿಷಯ** : ದಿವಂಗತ ಶ್ರೀ ಮಲ್ಲಿಕಾರ್ಜುನ ಬಂಡೆ, ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಗುಲ್ಬರ್ಗಾ ಇವರ ಕುಟುಂಬಕ್ಕೆ ಮತ್ತು ಇವರ ನೇತೃತ್ವದ ತಂಡಕ್ಕೆ ಪರಿಹಾರ ಘೋಷಿಸುವ ಬಗ್ಗೆ.

**ಪ್ರಸ್ತಾವನೆ :**

ದಿನಾಂಕ: 08–01–2014ರಂದು ಗುಲ್ಬರ್ಗಾ ನಗರದ ರೋಜಾ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಭೂಗತ ಪಾತಕಿ ಹಾಗೂ ಸುಪಾರಿ ಕಿಲ್ಲರ್ ಮುನ್ನಾ ಹಾಗೂ ಆತನ ಸಹಚರರು ಯೋಜಿಸಿದ್ದ ದುಷ್ಕೃತ್ಯದ ಸುಳಿವಿನ ಮಾಹಿತಿ ಮೇರೆಗೆ, ಅಡಗಿದ್ದ ಸ್ಥಳಕ್ಕೆ ಶ್ರೀ ಮಲ್ಲಿಕಾರ್ಜುನ ಬಂಡೆ, ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಇವರ ನೇತೃತ್ವದ ತಂಡವು ಬಂಧಿಸಲು ಹೋಗಿದ್ದ ವೇಳೆ ಪ್ರತಿರೋಧವಾಗಿ ಪಾತಕಿಗಳ ಗುಂಡಿನ ಏಟಿಗೆ ತೀವ್ರವಾಗಿ ಗಾಯಗೊಂಡ ಶ್ರೀ ಮಲ್ಲಿಕಾರ್ಜುನ ಬಂಡೆ ಅವರು ಹೈದರಾಬಾದ್‌ನ ಯಶೋದರಾ ಆಸ್ಪತ್ರೆಯಲ್ಲಿ ಚಿಕಿತ್ಸೆಯು ಫಲಕಾರಿಯಾಗದೆ ದಿನಾಂಕ: 15–01–2014ರಂದು ಮೃತಪಟ್ಟಿರುತ್ತಾರೆ ಈ ಘಟನೆಯ ಹಿನ್ನೆಲೆಯಲ್ಲಿ ದಿವಂಗತ ಶ್ರೀ ಮಲ್ಲಿಕಾರ್ಜುನ ಬಂಡೆ ಪಿಎಸ್‌ಐ ಹಾಗೂ ಇತರ ಅಧಿಕಾರಿಗಳು ತೋರಿದ ಸಾಹಸವನ್ನು ಗಮನದಲ್ಲಿಟ್ಟುಕೊಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 1 ಪಿಸಿಇ 2014, ಬೆಂಗಳೂರು, ದಿನಾಂಕ: 27–01–2014.**

ಸರ್ಕಾರವು ದಿವಂಗತ ಶ್ರೀ ಮಲ್ಲಿಕಾರ್ಜುನ ಬಂಡೆ, ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಗುಲ್ಬರ್ಗಾ ಇವರ ಕುಟುಂಬ ವರ್ಗಕ್ಕೆ ಹಾಗೂ ಇವರೊಂದಿಗೆ ಗಾಯಗೊಂಡ ಪೊಲೀಸ್ ಅಧಿಕಾರಿಗಳಿಗೆ ಈ ಕೆಳಕಂಡಂತೆ ಪರಿಹಾರ ನೀಡಲು ಆದೇಶಿಸಿದೆ.

1) ದಿವಂಗತರ ಕುಟುಂಬ ವರ್ಗಕ್ಕೆ ರೂ.50.00 ಲಕ್ಷ(ರೂಪಾಯಿ ಐವತ್ತು ಲಕ್ಷ) ಪರಿಹಾರ ಧನ
2) ಸಾಧಾರಣ ಗಾಯಗೊಂಡು ಚಿಕಿತ್ಸೆ ಪಡೆದಿರುವ ಶ್ರೀ ಮುರಳಿ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ ಒಂದು ಲಕ್ಷ ರೂಪಾಯಿಗಳ ಅನುಗ್ರಹ ಪೂರ್ವಕ ಪರಿಹಾರ.
3) ತೀವ್ರವಾಗಿ ಗಾಯಗೊಂಡು ಚಿಕಿತ್ಸೆ ಪಡೆದಿರುವ ಶ್ರೀ ಉದ್ದಂಡಪ್ಪ, ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ ಎರಡು ಲಕ್ಷ ರೂಪಾಯಿಗಳ ಅನುಗ್ರಹ ಪೂರ್ವಕ ಪರಿಹಾರ.

2. ಮೇಲ್ಕಂಡ ಅಂಶಗಳಿಗೆ ಪರಿಹಾರ ಮೊತ್ತವನ್ನು ಲೆಕ್ಕ ಶೀರ್ಷಿಕೆ **2055–00–109–1–01–051 ಸಾಮಾನ್ಯ ವೆಚ್ಚಗಳು, 2055–00–109–1–01–003 ಸಿಬ್ಬಂದಿ ವೇತನ ಮತ್ತು 2055–00–109–1–01–014** ಇತರೆ ಭತ್ಯೆಗಳು ಅಡಿಯಲ್ಲಿ ಭರಿಸಿ ವಿತರಿಸಲು ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರಿಗೆ ಆದೇಶಿಸಿದೆ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: Pr. Secy.FD. No.336 ದಿನಾಂಕ: 27–01–2014ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋವಿಂದಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

**P.R:168**

**S.C: 50**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ನೀಡಿರುವ ದುಡಿಯುವ ಬಂಡವಾಳ ಸಾಲ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ವಾಕೈ 36 ಸಸಕಾ 2013, ದಿನಾಂಕ: 21–09–2013.

**ಪ್ರಸ್ತಾವನೆ :**

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಮಂಡ್ಯ ಜಿಲ್ಲೆ ಈ ಕಾರ್ಖಾನೆಯ 2013–14ನೇ ಸಾಲಿನ ಕಬ್ಬು ನುರಿಸುವ ಹಂಗಾಮು ಪ್ರಾರಂಭಿಸುವ ಸಲುವಾಗಿ ದುಡಿಯುವ ಬಂಡವಾಳ ಸಾಲವಾಗಿ ರೂ.10.00 ಕೋಟಿಗಳನ್ನು ಮೇಲೆ ಓದಲಾದ ಸರ್ಕಾರಿ ಆದೇಶದ ಮೂಲಕ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಿರುವ ಸದರಿ ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 36 ಸಸಕಾ 2013, ಬೆಂಗಳೂರು, ದಿನಾಂಕ: 09–01–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಈ ಕಾರ್ಖಾನೆಗೆ 2013–14ನೇ ಸಾಲಿನಲ್ಲಿ ರೂ.10.00 ಕೋಟಿ ದುಡಿಯುವ ಬಂಡವಾಳ ಸಾಲ ನೀಡಿದ್ದು ಸದರಿ ಸಾಲವನ್ನು ಸರ್ಕಾರಕ್ಕೆ ಮರುಪಾವತಿಸುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ **ಅನುಬಂಧದ** ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 02–01–2014ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 240 ವೆಚ್ಚ–2/2013ರ ಮೂಲಕ ನೀಡಿರುವ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಪರಮೇಶ್ವರಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ).

**Annexure**

Annexure to the G.O. No.CI 36 COF 2013 dated: 09.01.2014

Essential details of loans sanctioned vide Government order
No. CI 36 COF 2013; dated: 21.09.2013.

**LOANS AND ADVANCES BY STATE GOVERNMENT**

| | |
|---|---|
| 1. Sanctioning Authority | Government of Karnataka |
| 2. Sanction (G.O.No. and date) | No. CI 36 COF 2013; dated:21.09.2013 |
| 3. To whom sanctioned | Pandavapura Sahakari Sakkare Karkhane Niyamitha, Pandavapura, Mandya District |
| 4. Amount sanctioned (in words and figures) | ₹10.00 crores (Rupees Ten Crores only) |
| 5 . Sanction valid upto | Not applicable |
| 6. Purpose of the loan | Working Capital |
| 7. Payable in cash or adjustment | Cash/cheque |
| 8. Head of Account to which the loan is debitable | Plan |
| 9. Head of Account to which the loan is debitable | "6860-04-101-0- 10-394 Plan" |
| 10. Progressive amount of loan sanctioned to date in the financial year | **G.O.No.and date** / **Amount**: 1) No. CI 36 COF 2013 dated:21.09 .2013 — 10.00; Total — 10.00 |
| 11. Period of Loan | 5 years |
| 12. Moratorium towards repayment, if any | -No- |
| 13. Date and year from which repayment is to commence | 1.4.2014 |
| 14. Mode of repayment | By cheque/DD |
| 15. Rate of Interest<br>a) Normal rate<br>b) Penal rate of interest<br>( on overdue instalment for the period of default)<br>( on overdue instalment for the period default) | <br>12.5%<br>2.5% |
| 16. Adjustment of overdue loans, if any | ------ |

| | |
|---|---|
| 17. Authority, who countersigns the payees's receipt | Commissioner for Cane Development and Director of Sugar, Bangalore. |
| 18. Authority who maintains loan ledger and watchers recovery | Commissioner for Cane Development and Director of Sugar, Bangalore. |
| 19. Authority responsible for reconciliation and monitoring of loan | Commissioner for Cane Development and Director of Sugar, Bangalore. |
| 20. Authority to whom utilization certificates are to be given | Commissioner for Cane Development and Director of Sugar, Bangalore. |
| 21. Authority who should furnish estimate of recovery of loan and interest for inclusion in the budget estimates | Commissioner for Cane Development and Director of Sugar, Bangalore. |

**T. PARAMESWARAPPA**
Under Secretary to Government,
Commerce and Industries Department (Co-operative Sugar)

**P.R: 172**

## COMMERCE AND INDUSTRIES SECRETARIAT

**Sub:-** Reconstitution of Sub-Committee of State Level Export Promotion Council under ASIDE scheme.

**Ref:-** Government Order No.CI-290-SPC-94(P) Bangalore dated 28th February 2005.

**PREAMBLE:**

Assistance to States for Development of Export Infrastructure and other Allied Activities (ASIDE) Scheme is being implemented in the State since 2002 to promote and facilitate exports from the State. Further, Govt. of India has revised the ASIDE guidelines for the 12th plan period and suggested to have the 'basket of projects' approach in selection of projects. They also suggested for identification of the projects, which are essential for promotion and growth of exports and having a crucial bearing and direct linkage with the exports. Further, they have suggested to prepare action plan for 5 years and to select the proposals from 'basket of projects' on priority basis. These proposals are to be prioritized, scrutinized, appraised and approved by SLEPC. Further SLEPC shall monitor, oversee and review of the projects for implementation.

Under the circumstances explained above, the role of present Sub Committee of SLEPC constituted vide Govt. Order read above, has changed and it is felt necessary to have the Sub-Committee of SLEPC reconstituted to identity the proposals in consultation with the Export Promotion Councils, Trade Bodies, infrastructure development agencies etc., and to prepare action plan and shelf of projects for 12th plan period. This sub-committee shall prioritize, scrutinize and appraise the proposals, received from, the implementing agencies as regards to viability, cost of the project, ASIDE share and implementing .agency share and to recommend the SLEPC for approval. Governrnent has considered the recomrnendation of MD ,VTPC and Commissioner for ID in all its aspects. Hence, the following Order.

**GOVERNMENT ORDER NO. CI 25 SPI 2012(P1), BANGALORE, DATED 12th NOVEMBER, 2013.**

Government is pleased to reconstitute the Sub-Committee of SLEPC with the following members.

| | | |
|---|---|---|
| 1) | Commissioner for ID & Director of I and C | Chairman |
| 2) | Development Commissioner, CSEZ, Cochin. | Member |
| 3) | Director (Technical Cell), Commerce & Industries Dept., | Member |
| 4) | Chief Advisor, TECSOK | Member |
| 5) | FIEO, Bangalore. | Member |
| 6) | JDGFT, Bangalore | Member |
| 7) | SLBC Convener, Syndicate Bank | Member |
| 8) | Managing Director VTPC | Member -Secretary |

The terms of reference and scope of the Sub-Committee of SLEPC is as follows.

a) To ensure that the annual action plan and shelf of projects / basket of projects are prepared as per the ASIDE guidelines.

b) To ensure that the proposals are obtained from the implementing agencies for development of critical infrastructures which are having crucial bearing and direct linkage with the exports as per the ASIDE guidelines. .

c) To identify and prioritized the proposals from the basket of projects to examine and to place before the SLEPC for approval.

d) To obtain DPR from the implementing agencies and appraise the proposals as regards to their viability, cost of the projects and the quantum of financial assistance under the scheme.

e) To recommend the proposals along with cost of project, implementing agency share and ASIDE share for approval of SLEPC.

f) To monitor and review the implementation of the projects in the State.

g) To ensure that the implementing agencies are fulfilling all the conditions/criteria's as stipulated in the ASIDE guidelines.

h) Any other works relating to ASIDE scheme as per the recommendation of the SLEPC.

By Order and in the name of the Governor of Karnataka,

**S.UMADEVI,**

Desk Officer (Technical Cell),

Commerce and Industries Department.

**P.R: 173**

## ಕಂದಾಯ ಸಚಿವಾಲಯ

**ವಿಷಯ :** ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ-3ರ ಭೂಸ್ವಾಧೀನಕ್ಕೆ ಒಪ್ಪಿಗೆ ಐತೀರ್ಪು ರಚಿಸಲು ಜಮೀನುಗಳಿಗೆ ದರಗಳನ್ನು ಪರಿಷ್ಕರಿಸುವ ಬಗ್ಗೆ ಪರಿಶೀಲಿಸಲು ಸಮಿತಿ ರಚನೆ ಕುರಿತು.

**ಓದಲಾಗಿದೆ :** ಆಯುಕ್ತರು, ಪುಪು ಮತ್ತು ಭೂಸ್ವಾಧೀನ, ಕೃಮೇಯೋ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ಕಂದಾಯ ಇಲಾಖೆ, ನವನಗರ, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಮವ್ಯ/ಭೂಸ್ವಾ/ಸಿಬ್ಬಂದಿ/ವಹಿ-23/2010-11/3192, ದಿನಾಂಕ:02-09-2013.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪುಪು ಮತ್ತು ಭೂಸ್ವಾಧೀನ, ಕೃಮೇಯೋ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ನವನಗರ, ಬಾಗಲಕೋಟೆ ಇವರು ಪ್ರಸ್ತಾವನೆ ಸಲ್ಲಿಸಿ ಸರ್ಕಾರದ ಆದೇಶ ಸಂಖ್ಯೆ: ಕಂಇ 21 ಭೂಸ್ವಾಳ 2005ರ ದಿನಾಂಕ:03-01-2007ರಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯ ಬೆಳಗಾವಿ ಮತ್ತು ಗುಲಬರ್ಗಾ ವಿಭಾಗಗಳಿಗೆ ಸಂಬಂಧಿಸಿದಂತೆ ಭೂಸ್ವಾಧೀನಕ್ಕೆ ಪರಿಷ್ಕೃತ ದರವನ್ನು ನಿಗದಿಪಡಿಸಲಾಗಿರುತ್ತದೆ. ಸರ್ಕಾರವು ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ-3ಕ್ಕೆ ತಾತ್ವಿಕ ಒಪ್ಪಿಗೆ ನೀಡಿರುವುದರಿಂದ, ಭೂಸ್ವಾಧೀನ ಪ್ರಕ್ರಿಯೆಯನ್ನು ತ್ವರಿತವಾಗಿ ಮುಕ್ತಾಯ ಮಾಡಬೇಕಾಗಿರುತ್ತದೆ ಮತ್ತು ರೈತರಿಗೆ ಉತ್ತಮ ಪರಿಹಾರ ನೀಡಲು ಹಾಲಿ ಇರುವ ಒಪ್ಪಂದದ ಐತೀರ್ಪು ದರಗಳನ್ನು ಪರಿಷ್ಕರಿಸುವುದು ಅವಶ್ಯವಾಗಿರುವುದರಿಂದ ಸದರಿ ಉದ್ದೇಶಕ್ಕೆ ಸಂಬಂಧಿಸಿದಂತೆ ಮುಳುಗಡೆ ಪ್ರದೇಶ ಕಾಲುವೆ ಮತ್ತು ಇತರೆ ಉದ್ದೇಶಗಳಿಗಾಗಿ ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ಕರಡು ಪ್ರತಿಯಲ್ಲಿ ನಿಗದಿಪಡಿಸಿರುವ ಮಾರ್ಗಸೂಚಿಗಳನ್ನು ಗಮನದಲ್ಲಿಟ್ಟುಕೊಂಡು ತಾಲ್ಲೂಕುವಾರು ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ಭೂ ಪರಿಹಾರ ದರಗಳನ್ನು ನಿಗದಿಪಡಿಸಲು ಪ್ರಸ್ತಾವನೆಯನ್ನು ಕಂದಾಯ ಇಲಾಖೆಗೆ ಸಲ್ಲಿಸಲು ಮಾನ್ಯ ಜಲಸಂಪನ್ಮೂಲ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಆದ್ದರಿಂದ, ಮಾನ್ಯ ಪ್ರಧಾನ ಕಾರ್ಯದರ್ಶಿಗಳ ನೇತೃತ್ವದಲ್ಲಿ ದರ ಪರಿಷ್ಕರಣೆ ಬಗ್ಗೆ ಆಯಾ ಪ್ರಾದೇಶಿಕ ಆಯುಕ್ತರು ಹಾಗೂ ಕಂದಾಯ ಅಧಿಕಾರಿಗಳು ಹಾಗೂ ನೋಂದಣಿ ಅಧಿಕಾರಿಗಳನ್ನೊಳಗೊಂಡ ಸಲಹಾ ಸಮಿತಿ ರಚಿಸಿ ದರಗಳ ಬಗ್ಗೆ ಕ್ರಮ ಜರುಗಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಪುಪು ಮತ್ತು ಭೂಸ್ವಾಧೀನ, ಕೃಮೇಯೋ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ನವನಗರ, ಬಾಗಲಕೋಟೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಭೂಸ್ವಾಧೀನಕ್ಕೆ ಒಪ್ಪಿಗೆ ಐತೀರ್ಪು ರಚಿಸಲು ಜಮೀನುಗಳಿಗೆ ದರಗಳನ್ನು ಪರಿಷ್ಕರಿಸುವ ಬಗ್ಗೆ ಸಲಹಾ ಸಮಿತಿಯನ್ನು ರಚಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 144 ಭೂಸ್ವಾವಿ 2013, ಬೆಂಗಳೂರು, ದಿನಾಂಕ: 16-11-2013.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ-3ರ ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ಒಪ್ಪಿಗೆ ದರಗಳನ್ನು ಪರಿಷ್ಕರಿಸುವ ಬಗ್ಗೆ ಒಪ್ಪಿಗೆ ಐತೀರ್ಪು ರಚಿಸುವ ಕುರಿತು ಪರಿಶೀಲಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳುವ ಸಲುವಾಗಿ ಈ ಕೆಳಕಂಡಂತೆ ಸಲಹಾ ಸಮಿತಿಯನ್ನು ರಚಿಸಿದೆ.

| | | |
|---|---|---|
| 1 | ಪ್ರಾದೇಶಿಕ ಆಯುಕ್ತರು, ಬೆಳಗಾವಿ | ಅಧ್ಯಕ್ಷರು |
| 2 | ಆಯುಕ್ತರು, ಪುಪು ಮತ್ತು ಭೂಸ್ವಾಧೀನ, ಕೃಮೇಯೋ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ನವನಗರ, ಬಾಗಲಕೋಟೆ | ಸಹ ಅಧ್ಯಕ್ಷರು |
| 3 | ಜಿಲ್ಲಾಧಿಕಾರಿಗಳು, ಬೆಳಗಾವಿ | ಸದಸ್ಯರು |

| | | |
|---|---|---|
| 4 | ಜಿಲ್ಲಾಧಿಕಾರಿಗಳು, ಬಾಗಲಕೋಟೆ | ಸದಸ್ಯರು |
| 5 | ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಳಗಾವಿ | ಸದಸ್ಯರು |
| 6 | ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಳಗಾವಿ | ಸದಸ್ಯರು |
| 7 | ನಿಬಂಧಕರು, ಜಿಲ್ಲಾ ನೋಂದಣಿ ಮತ್ತು ಮುದ್ರಾಂಕ, ಬೆಳಗಾವಿ | ಸದಸ್ಯರು |
| 8 | ನಿಬಂಧಕರು, ಜಿಲ್ಲಾ ನೋಂದಣಿ ಮತ್ತು ಮುದ್ರಾಂಕ, ಬಾಗಲಕೋಟೆ | ಸದಸ್ಯರು |
| 9 | ಜನರಲ್ ಮ್ಯಾನೇಜರ್, ಪುನರ್ವಸತಿ ಮತ್ತು ಪುನನಿರ್ಮಾಣ, ಭೂಸ್ವಾಧೀನ, ಕೃಮೇಯೋ ನವನಗರ, ಬಾಗಲಕೋಟೆ | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಂಕರಗೌಡ ಸಿ.ದೊಡ್ಡಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾಧೀನ-1&3).

**P.R: 169**
**S.C: 100**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಇವರಿಗೆ ಮಂಜೂರು ಮಾಡಿರುವ ಜಮೀನನ್ನು ಹಿಂಪಡೆಯುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಸಿಐ 33 ಎಸ್‌ಪಿಐ 2008, ದಿನಾಂಕ 28-05-2009.
2. ಸರ್ಕಾರಿ ಆದೇಶ ಸಂಖ್ಯೆ : ಸಿಐ 175 ಎಸ್‌ಪಿಐ 2011, ದಿನಾಂಕ 18-08-2011.
3. ಸರ್ಕಾರಿ ಆದೇಶ ಸಂಖ್ಯೆ : ಸಿಐ 175 ಎಸ್‌ಪಿಐ 2011, ದಿನಾಂಕ 07-05-2012.
4. ಸರ್ಕಾರಿ ಆದೇಶ ಸಂಖ್ಯೆ : ಸಿಐ 176 ಎಸ್‌ಪಿಐ 2011, ದಿನಾಂಕ 18-08-2011.

**ಪ್ರಸ್ತಾವನೆ:**

ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ (ಜೆಸ್ಕೋ) (ಮೆ॥ ನಾಗಾರ್ಜುನ ಫರ್ಟಿಲೈಸರ್ ಮತ್ತು ಕೆಮಿಕಲ್ಸ್ ಲಿಮಿಟೆಡ್‌ರವರ ಸಮೂಹಕ್ಕೆ ಸಂಬಂಧಿಸಿದ ಕಂಪನಿ) ಘಟಕಕ್ಕೆ ಫರ್ಟಿಲೈಸರ್ ಮತ್ತು ಕೆಮಿಕಲ್ಸ್ ಘಟಕವನ್ನು ಸ್ಥಾಪಿಸುವ ಯೋಜನೆಗೆ ಮಂಗಳೂರು ತಾಲ್ಲೂಕಿನ ಬೈಕಂಪಾಡಿ, ಥೋಕೂರು, ಕೆಂಜಾರ್ ಮತ್ತು ಕುಲಾಯಿ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ 986.52 ಎಕರೆ ಭೂಮಿಯನ್ನು 1996-2001ನೇ ಸಾಲಿನ ಅವಧಿಯಲ್ಲಿ ಮಂಜೂರು ಮಾಡಿ ಹಸ್ತಾಂತರಿಸಲಾಗಿದೆ. ಈ ಸಂಬಂಧ ಸದರಿ ಕಂಪನಿಯು ರೂ. 30.79 ಕೋಟಿಗಳನ್ನು ಕೆಐಎಡಿಬಿಗೆ ಪಾವತಿಸಿರುತ್ತಾರೆ. ದೇಶದಲ್ಲಿಯ ಆರ್ಥಿಕ ಹಿಂಜರಿತವೂ ಸೇರಿ ಅನೇಕ ಕಾರಣಗಳಿಂದಾಗಿ, ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ರವರು ತಮ್ಮ ಬಂಡವಾಳ ಹೂಡಿಕೆ ಪ್ರಸ್ತಾವನೆಯನ್ನು ಕಾರ್ಯಗತಗೊಳಿಸಲು ಸಾಧ್ಯವಾಗಿರುವುದಿಲ್ಲ.

ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ರವರು ಮಾರ್ಚ್, 2001 ರಲ್ಲಿ ತಮಗೆ ಹಸ್ತಾಂತರಿಸಿದ ಎಲ್ಲಾ ಜಾಗವನ್ನು ಹಿಂದಿರುಗಿಸಿ ಕೊಡುವುದಾಗಿ ತಿಳಿಸಿರುತ್ತಾರೆ.

ಕೆಐಎಡಿಬಿ ಮಂಡಳಿ ಸಭೆಯ ತೀರ್ಮಾನದ ಪ್ರಕಾರ ಎಲ್ಲಾ ಜಮೀನನ್ನು ಹಿಂತಿರುಗಿ ಪಡೆಯುವುದರ ಬದಲು, ಸೂಕ್ತ ಕೈಗಾರಿಕೆಗಳಿಗೆ ಈ ಜಮೀನನ್ನು ಹಂಚಿಕೆ ಮಾಡಿ, ಬಂದ ಹಣವನ್ನು ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಕಂಪನಿಗೆ ಹಿಂದಿರುಗಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ. ಈ ರೀತಿ ವಿವಿಧ ಕೈಗಾರಿಕೆಗಳಿಗೆ ಒಟ್ಟು 244.26 ಎಕರೆ ಜಾಗವನ್ನು ಹಂಚಿಕೆ ಮಾಡಲಾಗಿರುತ್ತದೆ ಹಾಗೂ ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಕಂಪನಿಗೆ ಹಣ ಸಂದಾಯ ಮಾಡಲಾಗಿರುತ್ತದೆ.

ಉಳಿದಂತೆ 548.7 ಎಕರೆ ಜಾಗದಲ್ಲಿ 9 ವಿವಿಧ ಕೈಗಾರಿಕೆಗಳನ್ನು ಸ್ಥಾಪಿಸಲು ದಿನಾಂಕ 28-08-2007 ಮತ್ತು 19-11-2008 ರಂದು ನಡೆದ 10ನೇ ಮತ್ತು 16ನೇ ಎಸ್‌ಹೆಚ್‌ಎಲ್‌ಸಿಸಿ ಸಭೆಯಲ್ಲಿ ಅನುಮೋದನೆ ನೀಡಲಾಗಿರುತ್ತದೆ ಹಾಗೂ 200.00 ಎಕರೆ ಜಾಗವನ್ನು ಹಿಂದಿರುಗಿಸಲು ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಕಂಪನಿಗೆ ಸೂಚಿಸಲಾಗಿರುತ್ತದೆ.

2011ನೇ ಸಾಲಿನವರೆಗೆ ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಕಂಪನಿಯು ಮೇಲೆ ಸೂಚಿಸಿದಂತೆ 200.00 ಎಕರೆ ಜಾಗವನ್ನು ಹಿಂದಿರುಗಿಸಿರುವುದಿಲ್ಲ ಹಾಗೂ 2007 ಮತ್ತು 2008ನೇ ಸಾಲಿನಲ್ಲಿ ಅನುಮೋದನೆಯಾದ 9 ಪ್ರಸ್ತಾವನೆಗಳನ್ನು ಕಾರ್ಯಗತಗೊಳಿಸಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಆಗಸ್ಟ್, 2011ರಲ್ಲಿ ಸಮಗ್ರ ಟೌನ್‌ಶಿಪ್ ಹಾಗೂ ರಸಗೊಬ್ಬರ ತಯಾರಿಸುವ ಕಾರ್ಖಾನೆಯನ್ನು ಸ್ಥಾಪಿಸಲು 524.45 ಎಕರೆ ಜಾಗದಲ್ಲಿ ಸ್ಥಾಪಿಸಲು ಸರ್ಕಾರದಿಂದ ಮತ್ತೆ ಅನುಮೋದನೆ ಪಡೆದುಕೊಂಡಿರುತ್ತಾರೆ. ಆದರೆ, ಇಂದಿನವರೆಗೆ ಅನುಮೋದಿತ ಯೋಜನೆಗಳನ್ನು ಕಾರ್ಯಗತಗೊಳಿಸಲು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ.

ಈವರೆಗೆ ಯಾವುದೇ ಕೈಗಾರಿಕಾ ಚಟುವಟಿಕೆ ಇಲ್ಲದೇ, ಕಳೆದ 25 ವರ್ಷಗಳಿಂದ ಇಲ್ಲಿ ಕೈಗಾರಿಕೆ ಸ್ಥಾಪಿಸದೇ ಫಲವತ್ತಾದ ಭೂಮಿ ಯಾವುದೇ ಬಳಕೆಯಾಗದೇ ಬಂಜರು ಭೂಮಿಯಾಗಿ ಪರಿಣಮಿಸಿದೆ. ಆದ್ದರಿಂದ ಈ ಭೂಮಿಯನ್ನು ಕೈಗಾರಿಕೆಯಿಂದ ಹಿಂಪಡೆದು ಜಿಮ್ 2010–12ರಲ್ಲಿ ಹಲವಾರು ಯೋಜನೆಗಳು ಅನುಮೋದನೆಗೊಂಡಿದ್ದು, ಈ ಭೂಮಿಯನ್ನು ಹಂಚಿಕೆ ಮಾಡಬಹುದಾಗಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 175 ಎಸ್‌ಪಿಐ 2011, ಬೆಂಗಳೂರು, ದಿನಾಂಕ: 11–11–2013**

ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ (ಜೆಸ್ಕೋ) (ಮೆ॥ ನಾಗಾರ್ಜುನ ಫರ್ಟಿಲೈಸರ್ ಮತ್ತು ಕೆಮಿಕಲ್ಸ್ ಲಿಮಿಟೆಡ್‌ರವರ ಸಮೂಹಕ್ಕೆ ಸಂಬಂಧಿಸಿದ ಕಂಪನಿ) ಘಟಕವು ಈವರೆವಿಗೂ ಯೋಜನೆಯನ್ನು ಅನುಷ್ಠಾನಗೊಳಿಸದೇ ಇರುವ ಕಾರಣ ಸದರಿ ಘಟಕಕ್ಕೆ ನೀಡಿರುವ 986.52 ಎಕರೆ ಜಮೀನಿನಲ್ಲಿ ಈಗಾಗಲೇ ಬೇರೆ ಬೇರೆ ಘಟಕಗಳಿಗೆ ಕೆಐಎಡಿಬಿ ಯಿಂದ ಮರು ಹಂಚಿಕೆ ಮಾಡಿದ 244.26 ಎಕರೆ ಜಮೀನನ್ನು ಹೊರತುಪಡಿಸಿ ಉಳಿದ ಜಮೀನಿನ ಹಂಚಿಕೆಯನ್ನು ರದ್ದುಗೊಳಿಸಲಾಗಿದೆ. ಕೆಐಎಡಿಬಿಯು ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಕಂಪನಿಯ ವಶದಲ್ಲಿರುವ 742.26 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಸರ್ಕಾರಕ್ಕೆ ವರದಿ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR. 174**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಸಿ.ಐ.ಐ. ಸಂಸ್ಥೆಯು "20ನೇ ಪಾರ್ಟನರ್‌ಶಿಪ್ ಸಮಿಟ್ – 2014" ಕಾರ್ಯಕ್ರಮವನ್ನು ಬೆಂಗಳೂರು ನಗರದಲ್ಲಿ ಜನವರಿ 2014ರ ಮಾಹೆಯಲ್ಲಿ ರಾಜ್ಯ ಸರ್ಕಾರದ ಪಾಲುದಾರಿಕೆಯಾಗಿ ಆಯೋಜಿಸಲು ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ : ಕೈವಾಇ/ಎಇಪಿ/ಎ1/ಮುಂಯೋ/27/2013–14, ದಿನಾಂಕ 08–10–2013.
2. ನಿರ್ದೇಶಕರು, ಕಾನ್‌ಫೆಡರೇಷನ್ ಆಫ್ ಇಂಡಿಯನ್ ಇಂಡಸ್ಟ್ರಿ (ಸಿಐಐ), ಬೆಂಗಳೂರು ಇವರ ಪತ್ರ ದಿನಾಂಕ 01–10–2013.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಉಮಿ/ಪಾ.ಸ–2014/ಜಂ.ನಿ–1/42/2013–14, ದಿನಾಂಕ 05–09–2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು 2013–14ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2852–80–102–0–02–125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಆಧುನೀಕರಣ" ಅಡಿ ಒಟ್ಟು ರೂ.2500.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದ್ದು, ಈ ಯೋಜನೆಯ ಉಪ ಯೋಜನೆಯಡಿ ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಗೆ ರೂ. 1750.00 ಲಕ್ಷಗಳ ಅನುದಾನ ಹಂಚಿಕೆ ಮಾಡಲಾಗಿದೆ ಎಂದೂ; ಕೇಂದ್ರ ಸರ್ಕಾರದ ವಿವಿಧ ಕ್ಷೇತ್ರಗಳಲ್ಲಿ ಹೆಚ್ಚಿನ ಬಂಡವಾಳ ಹೂಡಿಕೆಯನ್ನು ಆಕರ್ಷಿಸುವ ಹಿನ್ನೆಲೆಯಲ್ಲಿ 1995 ರಿಂದ ಪ್ರತಿ ವರ್ಷ ಜನವರಿ ಮಾಹೆಯಲ್ಲಿ ಆಯ್ದ ಒಂದು ರಾಜ್ಯದ ರಾಜಧಾನಿ ನಗರದಲ್ಲಿ ವಿವಿಧ ದೇಶಗಳ ಮಂತ್ರಿಗಳು, ಹಿರಿಯ ಅಧಿಕಾರಿಗಳು, ಕೈಗಾರಿಕೋದ್ಯಮಿಗಳು, ಇತ್ಯಾದಿಗಳನ್ನೊಳಗೊಂಡ ಅಂತರರಾಷ್ಟ್ರ ಮಟ್ಟದ ಪಾರ್ಟನರ್‌ಶಿಪ್ ಸಮಿಟ್‌ನ್ನು ಸಿ.ಐ.ಐ. ರವರ ಸಹಯೋಗದೊಂದಿಗೆ ನಡೆಸುತ್ತಾ ಬಂದಿದ್ದು, 2014ನೇ ಜನವರಿ 27 ರಿಂದ 29ರ ವರೆಗೆ ನಡೆಯಲಿರುವ "ಪಾರ್ಟನರ್‌ಶಿಪ್ ಸಮಿಟ್–2014" ಕಾರ್ಯಕ್ರಮವನ್ನು ಬೆಂಗಳೂರಿನಲ್ಲಿ ನಡೆಸುವ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳು ಒಪ್ಪಿಗೆ ತಿಳಿಸಿದ್ದು, ರಾಜ್ಯ ಸರ್ಕಾರವು ಈ ಬಗ್ಗೆ ಪೂರ್ಣ ಸಹಕಾರ ನೀಡುವುದಾಗಿ ತಿಳಿಸಿರುತ್ತಾರೆ. ಈ ಕಾರ್ಯಕ್ರಮದಿಂದ ರಾಜ್ಯಕ್ಕೆ ವಿವಿಧ ದೇಶಗಳಿಂದ ಹೆಚ್ಚಿನ ಬಂಡವಾಳ ಹರಿದು ಬರುವ ಸಾಧ್ಯತೆಗಳಿರುವುದರಿಂದ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸುವ ಬಗ್ಗೆ ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಳ್ಳಲು ಸಭೆಗಳನ್ನು ನಡೆಸಲಾಗುತ್ತಿದೆ ಎಂದು ಮೇಲೆ ಓದಲಾದ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ರವರು ತಿಳಿಸಿರುತ್ತಾರೆ ಎಂದು ತಿಳಿಸುತ್ತಾ, ಪಾರ್ಟನರ್‌ಶಿಪ್ ಸಮಿಟ್ ಕಾರ್ಯಕ್ರಮದಲ್ಲಿ ಆತಿಥ್ಯ ನೀಡುವ ರಾಜ್ಯಗಳು ಕಾರ್ಯಕ್ರಮಕ್ಕೆ ತಗಲುವ ಒಟ್ಟು ವೆಚ್ಚದಲ್ಲಿ ಭಾಗಶಃ ಹಣಕಾಸಿನ ಸಹಾಯ ಒದಗಿಸುವುದು ವಾಡಿಕೆಯಲ್ಲಿದ್ದು, 2014ರ ಪಾರ್ಟನರ್‌ಶಿಪ್ ಸಮಿಟ್ ಕಾರ್ಯಕ್ರಮಕ್ಕೆ ಒಟ್ಟು ರೂ. 6.85 ಕೋಟಿ ಖರ್ಚಾಗುವ ನಿರೀಕ್ಷೆ ಇದ್ದು, ಈ ಪೈಕಿ ರಾಜ್ಯ ಸರ್ಕಾರದಿಂದ ಶೇ.50 ರಷ್ಟು ಅಂದರೆ ರೂ. 3.43 ಕೋಟಿ ಅನುದಾನ ಬಿಡುಗಡೆ ಮಾಡಲು ಸಿ.ಐ.ಐ. ರವರು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿರುತ್ತಾರೆ.

ಆದುದರಿಂದ ಸಿ.ಐ.ಐ. ಸಂಸ್ಥೆಯ ಸಹಯೋಗದೊಂದಿಗೆ 2014ನೇ ಜನವರಿ 27 ರಿಂದ 29ರವರೆಗೆ ಏರ್ಪಡಿಸಲು ಉದ್ದೇಶಿಸಿರುವ "20ನೇ ಪಾರ್ಟನರ್‌ಶಿಪ್ ಸಮಿಟ್–2014" ಕಾರ್ಯಕ್ರಮ ಆಯೋಜಿಸಲು ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಗೆ ರೂ. 300.00 ಲಕ್ಷ ಅನುದಾನ ಮಂಜೂರು ಮಾಡಿ ಬಿಡುಗಡೆ ಮಾಡಬೇಕೆಂದು ಶಿಫಾರಸ್ಸು ಮಾಡಿ ತಡೆಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 189 ಎಸ್‌ಪಿಐ 2013, ಬೆಂಗಳೂರು, ದಿನಾಂಕ: 07–11–2013**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2013–14ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ "2852–80–102–0–02(125)ರ ಮೂಲಭೂತ ಸೌಕರ್ಯ ಮತ್ತು ವ್ಯಾಪಾರ ಉತ್ತೇಜನ ಆಧುನೀಕರಣ" ಯೋಜನೆಯಡಿ ಹಂಚಿಕೆಯಾಗಿರುವ ರೂ. 1750.00 ಲಕ್ಷಗಳ ಅನುದಾನದಿಂದ ರೂ.300.00 ಲಕ್ಷಗಳನ್ನು (ಮೂರು ನೂರು ಲಕ್ಷ ರೂಪಾಯಿಗಳು ಮಾತ್ರ) ಸಿ.ಐ.ಐ. ಸಂಸ್ಥೆಯ ಸಹಯೋಗದೊಂದಿಗೆ 2014ನೇ ಜನವರಿ 27 ರಿಂದ 29ರ ವರೆಗೆ ಏರ್ಪಡಿಸಲು ಉದ್ದೇಶಿಸಿರುವ "20ನೇ ಪಾರ್ಟನರ್‌ಶಿಪ್ ಸಮಿಟ್–2014" ಕಾರ್ಯಕ್ರಮ ಆಯೋಜಿಸಲು ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಸಂಸ್ಥೆಗೆ ಬಿಡುಗಡೆ ಮಾಡಿದೆ.

ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲುಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಸದರಿ ಅನುದಾನವನ್ನು ಉಪಯೋಗಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ ನಿಯಮಗಳನ್ನು ಅನುಸರಿಸತಕ್ಕದ್ದು. ಅನುದಾನವನ್ನು ಪೂರ್ಣವಾಗಿ ವೆಚ್ಚ ಮಾಡಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು (Utilization Certificate) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ವಾಕೈ 204 ಆಂಆಸ (1) 2013, ದಿನಾಂಕ 30–10–2013ರ ಸಹಮತಿ ಹಾಗೂ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR. 175**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಸಿ.ಐ.ಐ. ಸಂಸ್ಥೆಯು "20ನೇ ಪಾರ್ಟನರ್‌ಶಿಪ್ ಸಮಿಟ್ – 2014" ಕಾರ್ಯಕ್ರಮವನ್ನು ಬೆಂಗಳೂರು ನಗರದಲ್ಲಿ ಜನವರಿ 2014ರ ಮಾಹೆಯಲ್ಲಿ ರಾಜ್ಯ ಸರ್ಕಾರದ ಪಾಲುದಾರಿಕೆಯಾಗಿ ಆಯೋಜಿಸಲು ಸಮನ್ವಯ ಮತ್ತು ಉಪ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಹಾಗೂ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರೊಂದಿಗೆ ದಿನಾಂಕ 11–11–2013 ರಂದು ನಡೆದ ಚರ್ಚೆ ಹಾಗೂ ಆಯುಕ್ತರು ಸಲ್ಲಿಸಿದ ಸಮಿತಿಗಳ ವಿವರಗಳು.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ವಿವಿಧ ಕ್ಷೇತ್ರಗಳಲ್ಲಿ ಹೆಚ್ಚಿನ ಬಂಡವಾಳ ಹೂಡಿಕೆಯನ್ನು ಆಕರ್ಷಿಸುವ ಹಿನ್ನೆಲೆಯಲ್ಲಿ 1995 ರಿಂದ ಪ್ರತಿ ವರ್ಷ ಜನವರಿ ಮಾಹೆಯಲ್ಲಿ ಆಯ್ದ ಒಂದು ರಾಜ್ಯದ ರಾಜಧಾನಿ ನಗರದಲ್ಲಿ ವಿವಿಧ ದೇಶಗಳ ಮಂತ್ರಿಗಳು, ಹಿರಿಯ ಅಧಿಕಾರಿಗಳು, ಕೈಗಾರಿಕೋದ್ಯಮಿಗಳು, ಇತ್ಯಾದಿಗಳನ್ನೊಳಗೊಂಡ ಅಂತರರಾಷ್ಟ್ರ ಮಟ್ಟದ ಪಾರ್ಟನರ್‌ಶಿಪ್ ಸಮಿಟ್‌ನ್ನು ಸಿ.ಐ.ಐ. ರವರ ಸಹಯೋಗದೊಂದಿಗೆ ನಡೆಸುತ್ತಾ ಬಂದಿದ್ದು, 2014ನೇ ಜನವರಿ 27 ರಿಂದ 29ರ ವರೆಗೆ ನಡೆಯಲಿರುವ "ಪಾರ್ಟನರ್‌ಶಿಪ್ ಸಮಿಟ್–2014" ಕಾರ್ಯಕ್ರಮವನ್ನು ಬೆಂಗಳೂರಿನಲ್ಲಿ ನಡೆಸುವ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳು ಒಪ್ಪಿಗೆ ತಿಳಿಸಿದ್ದು, ರಾಜ್ಯ ಸರ್ಕಾರವು ಈ ಬಗ್ಗೆ ಪೂರ್ಣ ಸಹಕಾರ ನೀಡುವುದಾಗಿ ತಿಳಿಸಿರುತ್ತಾರೆ. ಈ ಕಾರ್ಯಕ್ರಮದಿಂದ ರಾಜ್ಯಕ್ಕೆ ವಿವಿಧ ದೇಶಗಳಿಂದ ಹೆಚ್ಚಿನ ಬಂಡವಾಳ ಹರಿದು ಬರುವ ಸಾಧ್ಯತೆಗಳಿರುವುದರಿಂದ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸುವ ಬಗ್ಗೆ ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಳ್ಳಲು ಸಭೆಗಳನ್ನು ನಡೆಸಲಾಗುತ್ತಿದೆ ಎಂದು ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ತಿಳಿಸಿರುತ್ತಾರೆ.

ಮುಂದುವರೆದು ಸಿ.ಐ.ಐ. ರವರು ಕಾರ್ಯಕ್ರಮ ನೆರವೇರಿಸಲು ಸಂಕ್ಷಿಪ್ತ ಕ್ರಿಯಾ ಯೋಜನೆಯನ್ನು ಒದಗಿಸಿರುತ್ತಾರೆ. ಇದರಂತೆ, ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿ ಹಾಗೂ ವಿವಿಧ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಉಪ ಸಮಿತಿಗಳನ್ನು ರಚಿಸಬೇಕೆಂದು ದಿನಾಂಕ 11–11–2013ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರೊಂದಿಗೆ ನಡೆದ ಚರ್ಚೆಯ ಸಮಯದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ತಿಳಿಸಿರುತ್ತಾರೆ ಹಾಗೂ ರಚಿಸಬೇಕಾದ ಸಮಿತಿಗಳ ವಿವರಗಳನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 189 ಎಸ್‌ಪಿಐ 2013, ಬೆಂಗಳೂರು, ದಿನಾಂಕ: 18–11–2013**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸಿ.ಐ.ಐ. ಸಂಸ್ಥೆಯ ಸಹಯೋಗದೊಂದಿಗೆ 2014ನೇ ಜನವರಿ 27 ರಿಂದ 29ರ ವರೆಗೆ ಏರ್ಪಡಿಸಲು ಉದ್ದೇಶಿಸಿರುವ "20ನೇ ಪಾರ್ಟನರ್‌ಶಿಪ್ ಸಮಿಟ್ – 2014" ಕಾರ್ಯಕ್ರಮವನ್ನು ಯಶಸ್ವಿಯಾಗಿ ನೆರವೇರಿಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿ ಹಾಗೂ ವಿವಿಧ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಉಪ ಸಮಿತಿಗಳನ್ನು ಈ ಮೂಲಕ ರಚಿಸಲಾಗಿದೆ.

ಸಮನ್ವಯ ಸಮಿತಿ ಹಾಗೂ ಉಪ ಸಮಿತಿಗಳ ವಿವರಗಳು ಹಾಗೂ ಅವುಗಳ ಜವಾಬ್ದಾರಿಗಳನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸರ್ಕಾರಿ ಆದೇಶ ಸಿಐ 189 ಎಸ್‌ಪಿಐ 2013, ದಿನಾಂಕ 18–11–2013 ಕ್ಕೆ ಸಂಬಂಧಿಸಿದ**

**ಅನುಬಂಧ**

## A) Co-ordination Committee

### Composition of the Committee

| Sl. No. | Details of Members | |
|---|---|---|
| 1 | Chief Secretary, GOK | Chairman |
| 2 | Additional Chief Secretary, GOK, Commerce and Industries | Member |
| 3 | Additional Chief Secretary, GOK, Tourism Department | Member |
| 4 | Principal Secretary, GOK, Finance Department | Member |
| 5 | Principal Secretary, GOK, IDD | Member |
| 6 | Principal Secretary, GOK, IT & BT | Member |
| 7 | Principal Secretary, GOK, Planning Department | Member |
| 8 | Principal Secretary, GOK, Energy | Member |
| 9 | Principal Secretary, GOK, Higher Education | Member |
| 10 | Principal Secretary, Revenue | Member |
| 11 | Principal Secretary, PWD | Member |
| 12 | Principal Secretary, UDD | Member |
| 13 | Principal Secretary, Home Department | Member |
| 14 | Representative from CII | Member |
| 15 | DG & IGP | Member |
| 16 | Chairman and Member Secretaries of all Sub Committees | Members |
| 17 | Commissioner for I.D. and Director of Industries and Commerce | Member-Secretary |

### Role of Co-ordination Committee

- Monitoring the activities of various sub committees.
- The Committee may co-opt other members.

## B. SUB COMMITTEES

### B1 – Protocol and Reception Committee

### Composition of the Committee

| Sl. No. | Details of Members | |
|---|---|---|
| 1 | Secretary, GOK, C & I Department | Chairman |
| 2 | Representative from IDD | Member |
| 3 | Secretary, PWD | Member |
| 4 | Representative from CII | Member |

| Sl. No. | Details of Members | |
|---|---|---|
| 5 | Representative from KUM (DD-2) | Member |
| 6 | Additional Director, I & C Department (name of the officer will be furnished by Directorate) | Member-Secretary |
| 7 | Representative from Protocol Cell, GOK | Member |

**Role:**

- Protocol arrangements at Airport, Customs Immigration, Parking of Private Aircrafts, Entry of Vehicles, etc.
- Arrange for Reception Counter
- VVIP Lounge
- Reception Committee
- Review meetings with Airport Director
- Getting the necessary Government clearance organized
- Welcome Hoardings/Signages
- Beautification of Airport Approach Road
- Flags/Fountains
- Permanent Contribution to Airport Beautification
- To oversee accommodation arrangements
- To also arrange for State Government Guest Houses for accomodation of Central Ministers/ Senior Government Officials/Other VIPs.
- The Committee may co-opt other members.

**B2 – City (Bangalore) Beautification**

**B2- City (Bangalore) Beautification Committee**

**Composition of the Committee**

| Sl. No. | Details of Members | |
|---|---|---|
| 1 | Commissioner, BBMP | Chairman |
| 2 | Chief Engineer, BWSSB | Member |
| 3 | MD, BESCOM | Member |
| 4 | Additional Director General of Police, Law & Order | Member |
| 5 | Representative from CII | Member |
| 6 | Representative from KSPCB | Member |
| 7 | Representative from BMTC | Member |
| 8 | Additional Director, Department of Industries and Commerce (name of the officers will be furnished by Directorate) | Member-Secretary |
| 9 | Director, Horticulture Department | Member |
| 10 | Representative from KUM (Deputy Director-1) | Member |

**Role:**

- Beatification of approach road to Bangalore city
- Flags, Fountain and Flowers
- Cleaning and beautification of the road approaching the Summit Venue, tourist attractions and market places
- The Committee may co-opt other members

**B-3- Traffic Management Committee**

**Composition of the Committee**

| Sl. No. | Details of Members | |
|---|---|---|
| 1 | Additional Commissioner, Traffic | Chairman |
| 2 | Additional Commissioner, BBMP | Member |
| 3 | Joint Commissioner, Transport Department | Member |
| 4 | JD, I & C Department (name of the officers will be furnished by Directorate) | Member-Secretary |
| 5 | Representatives from CII<br>(Representatives names to be indicated by concerned Associations) | Members |
| 6 | Representative from KUM (AD-2) | Member |

**Role:**

- Facilitating smooth movement of VIPs
- Clear path from the Airport to the Summit venue etc.
- The Committee may co-opt other members.

**B-4 – Security Sub Committee**

**Composition of the Committee**

| Sl. No. | Details of Members | |
|---|---|---|
| 1 | IGP, Central Range | Chairman |
| 2 | Additional Commissioner, BBMP | Member |
| 3 | Joint Commissioner, Transport Department | Member |
| 4 | Additional Director, I & C Department (name of the officer will be furnished by Directorate) | Member-Secretary |
| 5 | Representatives from CII | Member |
| 6 | Representative from KUM (AD-3) | Member |

**Role:**

- Co-ordination amongst IB, Police Commissioner, SPG for identifying security requirements and undertaking necessary action
- Security for VVIP vehicles
- Drawing up of alternative routes for VVIPs
- Sensitizing all possible VVIP routes including any sightseeing visits/routes towards dinner venues
- The Committee may co-opt other members

**B-5 – Cultural and Dinner Committee**

**Composition of the Committee**

| Sl. No. | Details of Members | |
|---|---|---|
| 1 | Commissioner, Industries and Commerce Department | Chairman |
| 2 | Director, Kannada & Culture | Member |
| 3 | Representatives from Information and Publicity office | Member |
| 4 | JD (AEP), I & C Department | Member |
| 5 | Assistant Director-3, KUM | Member |
| 6 | Managing Director, KUM | Member-Secretary |

**Role:**

- Welcome Dinner on 27th January hosted by the Government of Karnataka for speakers and delegates of the summit.
- Cultural Programme for two evenings during the summit, showcasing the rich cultural heritage and history of the State
- Business Networking Lunch to be hosted by the State Government
- The Committee may co-opt other members.

**B-6 – Media and Publicity Committee**

**Composition of the Committee**

| Sl. No. | Details of Members | |
|---|---|---|
| 1 | Director, Information and Publicity Department | Chairman |
| 2 | MD, MC & A | Member |
| 3 | Representatives from KUM (JD-3) | Member-Secretary |
| 4 | Representatives from CII | Member |
| 5 | Representatives from I & C Department (name of the officers will be furnished by Directorate) | Member |

**Role:**

- A co-ordinated media plan (print and electronic) projecting both the State and the event separately.
- Calling for Investment proposals in the run up to the Summit
- Hoardings to be provided at prominent positions
- Press Releases (pre-event & during event)
- One to one press interviews (pre-event & during event)
- The Committee may co-opt other members.

**S. UMADEVI,**
Desk Officer (Technical Cell)
Commerce & Industries

**PR. 176**

**ಒಳಾಡಳಿತ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ : ಹೆಚ್‌ಡಿ 72 ಎಸ್‌ಎಸ್‌ಟಿ 2014, ಬೆಂಗಳೂರು, ದಿನಾಂಕ : 01–03–2014.**

2014ರ ಲೋಕಸಭಾ ಚುನಾವಣೆಯು ಏಪ್ರಿಲ್/ಮೇ 2014 ರಂದು ನಡೆಯಲಿದ್ದು ಚುನಾವಣೆ ಸಮಯದಲ್ಲಿ ಈ ಕೆಳಕಂಡ ಕ್ರಮಗಳನ್ನು ಚಾಚೂತಪ್ಪದೇ ಪಾಲಿಸತಕ್ಕದ್ದು.

1. ಜಿಲ್ಲಾಧಿಕಾರಿಗಳು ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಜೊತೆಗೂಡಿ ಅವರವರ ಜಿಲ್ಲೆಗಳಲ್ಲಿನ ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳನ್ನು ಗುರುತಿಸಿ ಕೂಡಲೇ ಪಟ್ಟಿಯನ್ನು ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು.
2. ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳಿಗೆ ಸೂಕ್ತ ಭದ್ರತಾ ವ್ಯವಸ್ಥೆಗಳನ್ನು ಮಾಡತಕ್ಕದ್ದು.
3. ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳ ಭದ್ರತೆಯನ್ನು ಪೊಲೀಸ್ ಸಿಬ್ಬಂದಿಯಿಂದಲೇ ಮಾಡತಕ್ಕದ್ದು ಹಾಗೂ ಗೃಹ ರಕ್ಷಕ ದಳದ ಸಿಬ್ಬಂದಿಗಳನ್ನು ನೇಮಿಸಬಾರದು.
4. ಮೂರಕ್ಕಿಂತ ಹೆಚ್ಚು ಸಾಮಾನ್ಯ ಮತಗಟ್ಟೆಗಳು ಒಂದೇ ಸ್ಥಳದಲ್ಲಿದ್ದರೆ, ಅವುಗಳಿಗೆ ಬಂದೋಬಸ್ತ್ ನೀಡಲು ಕನಿಷ್ಠ ಒಬ್ಬ ಮುಖ್ಯ ಪೇದೆ ಹಾಗೂ ಅವರ ಜೊತೆ ಗೃಹ ರಕ್ಷಕ ದಳದ ಸಿಬ್ಬಂದಿ ಅಥವಾ ಪೊಲೀಸರನ್ನು ಒದಗಿಸುವುದು. ಗೃಹ ರಕ್ಷಕ ದಳದವರನ್ನು ಎಲ್ಲಾ ಸಾಮಾನ್ಯ ಮತಗಟ್ಟೆಗಳಲ್ಲಿ ನೇಮಿಸಲು ಕ್ರಮ ವಹಿಸುವುದು.
5. ಜಿಲ್ಲಾ ಪೊಲೀಸ್ ಅಧೀಕ್ಷಕರು ಅವಶ್ಯಕತೆಗೆ ತಕ್ಕಂತೆ ಸಂಚಾರಿ ದಳಗಳನ್ನು ರಚಿಸಬೇಕು. ಚುನಾವಣಾ ಪ್ರಕ್ರಿಯೆ ನಡೆಯುವಾಗ ಯಾವುದಾದರೂ ಮತಗಟ್ಟೆಯಲ್ಲಿ ಜನಸಂಚಾರ, ದಟ್ಟಣೆ ಅಥವಾ ಯಾವುದೇ ಅಹಿತಕರ ಘಟನೆ ನಡೆಯುವ ಪ್ರಸಂಗವುಂಟಾದಲ್ಲಿ ಈ ಸಂಚಾರಿ ದಳಗಳನ್ನು ನಿಯೋಜಿಸಿ ಅಂತಹ ಮತಗಟ್ಟೆಗಳಿಗೆ ಸೂಕ್ತ ಭದ್ರತೆ ನೀಡತಕ್ಕದ್ದು.
6. ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್, ಡಿವೈಎಸ್‌ಪಿ ಹಾಗೂ ಹೆಚ್ಚುವರಿ ಪೊಲೀಸ್ ಅಧೀಕ್ಷಕರುಗಳು ಇವರುಗಳು ತಮ್ಮ ಸ್ವಂತ ಊರು/ಜಿಲ್ಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದರೆ, ಅವರನ್ನು ಕೂಡಲೇ ಅಲ್ಲಿಂದ ಬೇರೆ ಕಡೆಗೆ ವರ್ಗಾವಣೆ ಮಾಡತಕ್ಕದ್ದು.

7. ಚುನಾವಣಾ ಪೂರ್ವದಲ್ಲಿ ಶಸ್ತ್ರಾಸ್ತ್ರ ಪರವಾನಗಿ ಹೊಂದಿರುವವರು ಶಸ್ತ್ರಾಸ್ತ್ರಗಳನ್ನು ತಕ್ಷಣ ಠೇವಣಿ ಇಡುವಂತೆ ನಿರ್ದೇಶಿಸುವುದು. ಈ ಸಂಬಂಧ ಸಂಪೂರ್ಣ ಮಾಹಿತಿ ಗಣಕಯಂತ್ರದಲ್ಲಿ ಲಭ್ಯವಿರುವಂತೆ ನೋಡಿಕೊಳ್ಳುವುದು.
8. ಚುನಾವಣಾ ವೇಳೆಯಲ್ಲಿ ಹಾಗೂ ಚುನಾವಣಾ ಪೂರ್ವದಲ್ಲಿ ಜಿಲ್ಲೆಯಲ್ಲಿರುವ ಛತ್ರ, ಸಂಘ–ಸಂಸ್ಥೆಗಳು ಹಾಗೂ ಇತ್ಯಾದಿಗಳ ಮೇಲೆ ಕಟ್ಟುನಿಟ್ಟಿನ ನಿಗಾ ವಹಿಸುವುದು ಹಾಗೂ ಅವರುಗಳ ಕೆಲಸ ನಿರ್ವಹಣೆ ಮೇಲೂ ಸಹ ಗುಪ್ತಚರ ಅಧಿಕಾರಿಗಳಿಂದ ಮಾಹಿತಿ ತರಿಸಿ ನಿಗಾ ವಹಿಸುವುದು.
9. ಚುನಾವಣಾ ಪ್ರಕ್ರಿಯೆಯಲ್ಲಿ ಅಡಚಣೆ ಅಥವಾ ಯಾವುದೇ ತರಹದ ತೊಂದರೆಯನ್ನು ಉಂಟು ಮಾಡುವ ಸಾಧ್ಯತೆ ಇರುವ ಸಮಾಜಘಾತುಕ ವ್ಯಕ್ತಿಗಳ ಮೇಲೆ ತೀವ್ರ ನಿಗಾ ವಹಿಸುವುದು. ಅದೇ ರೀತಿ ವಿವಿಧ ಕಾಯ್ದೆ/ಕಾನೂನಿನಡಿಯಲ್ಲಿ ಕೆಲವರನ್ನು ಮುಂಜಾಗ್ರತಾ ಕ್ರಮವಾಗಿ ಬಂಧಿಸಿ ಕ್ರಮ ಕೈಗೊಳ್ಳುವುದು (Preventive Detention), ಅವಶ್ಯವಿದ್ದಲ್ಲಿ ಗಡೀಪಾರು ಮಾಡುವುದು.
10. ಜಿಲ್ಲೆಯಲ್ಲಿರುವ ಸಮಾಜಘಾತುಕ ವ್ಯಕ್ತಿಗಳ ಮೇಲೆ ವಿವಿಧ ಕಾನೂನಿನಡಿಯಲ್ಲಿ ಜಾರಿಯಾಗುವ ಬಾಕಿ ಇರುವ ಜಾಮೀನುರಹಿತ ವಾರಂಟ್‌ನ್ನು ಜಾರಿ ಮಾಡಿ ಸೂಕ್ತ ಕ್ರಮ ಜರುಗಿಸುವುದು.
11. ಚುನಾವಣಾ ಸಮಯದಲ್ಲಿ ಗಡಿ ಪ್ರದೇಶಗಳನ್ನು ಕಡ್ಡಾಯವಾಗಿ ಸೀಲ್ ಮಾಡುವುದು.
12. ಗಡಿ ಪ್ರದೇಶಗಳಲ್ಲಿ ಚೆಕ್‌ಪೋಸ್ಟ್‌ನ್ನು ಸ್ಥಾಪಿಸಿ ಗಡಿಪ್ರದೇಶಗಳಲ್ಲಿ ಓಡಾಡುವ ವಾಹನಗಳ ಹಾಗೂ ಜನರ ಚಲನವಲನಗಳ ಮೇಲೆ ಕಣ್ಗಾವಲಿರಿಸುವುದು.
13. ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ಒಂದು ಕಂಟ್ರೋಲ್ ರೂಂನ್ನು ಸ್ಥಾಪಿಸಿ ಅದರ ದೂರವಾಣಿ ಸಂಖ್ಯೆ ಮತ್ತು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯ ಹೆಸರು, ಹುದ್ದೆ, ದೂರವಾಣಿ ಸಂಖ್ಯೆ , ಮೊಬೈಲ್ ಸಂಖ್ಯೆ ಬಗ್ಗೆ ಚುನಾವಣಾ ಆಯೋಗಕ್ಕೆ ಹಾಗೂ ಸರ್ಕಾರಕ್ಕೆ (ಒಳಾಡಳಿತ ಇಲಾಖೆ) ವಿವರಗಳನ್ನು ಕಳುಹಿಸತಕ್ಕದ್ದು. ಸದರಿ ಕಂಟ್ರೋಲ್ ರೂಂನಲ್ಲಿ ಪ್ರತ್ಯೇಕವಾದ ದೂರು ಅರ್ಜಿ ವಹಿಯನ್ನು ನಿರ್ವಹಿಸತಕ್ಕದ್ದು. ಯಾರಾದರೂ ದೂರು ಸಲ್ಲಿಸಿದಲ್ಲಿ 24 ಗಂಟೆಗಳೊಳಗಾಗಿ ಅವರಿಗೆ ಉತ್ತರ ನೀಡತಕ್ಕದ್ದು. ಪ್ರತಿ ವಾರದ ಕೊನೆಯಲ್ಲಿ ಸ್ವೀಕರಿಸಿದ ಅರ್ಜಿಗಳು ಹಾಗೂ ವಿಲೇಯಾದ ಅರ್ಜಿಗಳ ಬಗ್ಗೆ ಅಂಕಿ–ಅಂಶಗಳನ್ನು ಜಿಲ್ಲಾಧಿಕಾರಿ ಹಾಗೂ ಚುನಾವಣಾ ವೀಕ್ಷಕರಿಗೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ದೂರು ಅರ್ಜಿಗೆ ಸಂಬಂಧಿಸಿದಂತೆ ಕ್ರಮ ಕೈಗೊಳ್ಳದೇ ಇದ್ದಲ್ಲಿ ಅದನ್ನು ರಾಜ್ಯ ಚುನಾವಣಾ ಆಯೋಗವು ಗಂಭೀರವಾಗಿ ಪರಿಗಣಿಸುವುದು.
14. ಚುನಾವಣಾ ವೀಕ್ಷಕರಿಗೆ ಸೂಕ್ತ ರಕ್ಷಣೆ ನೀಡಲು ಕ್ರಮ ಜರುಗಿಸುವುದು. ಅವರು ತಂಗಿರುವ ಸ್ಥಳದಲ್ಲಿ ಅವರಿಗೆ ರಕ್ಷಣೆ ಹಾಗೂ ಸ್ವತಃ ಅವರಿಗೆ ಕನಿಷ್ಠ ಒಬ್ಬ ಅಂಗರಕ್ಷಕನನ್ನು ಒದಗಿಸುವುದು.
15. ಚುನಾವಣಾ ವೇಳೆಯಲ್ಲಿ ಕಳ್ಳಭಟ್ಟಿ ಸಾರಾಯಿ, ಸೇಂದಿ ಹಾಗೂ ಸಾರಾಯಿ ಮಾರಾಟ ಆಗದಂತೆ ನೋಡಿಕೊಳ್ಳತಕ್ಕದ್ದು. ಜೊತೆಗೆ ಗಾಂಜಾ ಹಾಗೂ ನಾರ್ಕೋಟಿಕ್ ಡ್ರಗ್ಸ್‌ಗಳ ಮಾರಾಟ, ಕಳ್ಳಸಾಗಾಣೆ ಮೇಲೆ ತೀವ್ರ ನಿಗಾ ವಹಿಸುವುದು ಹಾಗೂ ಕಠಿಣ ಕ್ರಮ ತೆಗೆದುಕೊಳ್ಳುವುದು. ಚುನಾವಣಾ ವೇಳೆ ಹದ್ದುಬಸ್ತಿನ ಹೊರಗಡೆಯೂ ಸಹ ವಾಹನಗಳ ಹಾಗೂ ಜನರ ಚಲನವಲನಗಳ ಬಗ್ಗೆ ಸೂಕ್ಷ್ಮ ನಿಗಾ ವಹಿಸತಕ್ಕದ್ದು.
16. ಕ್ರಿಮಿನಲ್ ಅಪರಾಧದ ಹಿನ್ನೆಲೆಯುಳ್ಳ ವ್ಯಕ್ತಿಗಳು, ಗೂಂಡಾ ಚಟುವಟಿಕೆಗಳಲ್ಲಿ ಭಾಗಿಯಾಗಿರುವವರು, ಸಮಾಜಘಾತುಕ ವ್ಯಕ್ತಿಗಳು, ವೃತ್ತಿನಿರತ ಮಾಫಿಯಾಗಳ ಬಗ್ಗೆ ತೀವ್ರ ನಿಗಾ ಇಡುವುದು.
17. ಚುನಾವಣೆಗೆ ಸಂಬಂಧಿಸಿದಂತೆ ಯಾವುದೇ ದೂರು ಬಂದಲ್ಲಿ ಅದನ್ನು ಕೂಡಲೇ ಪರಿಶೀಲಿಸಿ ಅದರ ಬಗ್ಗೆ ವಿಚಾರಣೆ ಮಾಡಿ ಅದನ್ನು ವಿಲೇ ಮಾಡುವುದು. ದೂರುದಾರರಿಗೆ ಇದರ ಬಗ್ಗೆ ಹಿಂಬರಹವನ್ನು ನೀಡಿ ಪ್ರತಿಯನ್ನು ಮುಖ್ಯ ಚುನಾವಣಾಧಿಕಾರಿ, ಕರ್ನಾಟಕ ಸರ್ಕಾರ ಹಾಗೂ ಒಳಾಡಳಿತ ಇಲಾಖೆಯ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಯವರಿಗೆ ಸಲ್ಲಿಸುವುದು.
18. ಚುನಾವಣೆಯ ಸಮಯದಲ್ಲಿ ಹಾಗೂ ಚುನಾವಣೆಗೆ ಸಂಬಂಧಿಸಿದಂತೆ ಯಾವುದೇ ಕ್ರಿಮಿನಲ್ ಪ್ರಕರಣ ದಾಖಲಾದಲ್ಲಿ ಅಂತಹ ಪ್ರಕರಣಗಳಲ್ಲಿ ಸರ್ಕಾರಿ ಅಭಿಯೋಜಕರುಗಳು ಆರೋಪಿಗಳ ಜಾಮೀನು ಅರ್ಜಿಯನ್ನು ವಿರೋಧಿಸಿ ಜಾಮೀನು ಸಿಗದ ಹಾಗೆ ನ್ಯಾಯಾಲಯದಲ್ಲಿ ವಾದ ಮಂಡಿಸುವುದು.
19. ತಮ್ಮ ತಮ್ಮ ಜಿಲ್ಲೆಗಳಲ್ಲಿ ಅಲ್ಪಸಂಖ್ಯಾತರು, ಹಿಂದುಳಿದ ವರ್ಗದವರು ವಾಸಿಸುವ ಸ್ಥಳಗಳನ್ನು ಗುರುತಿಸಿ ಅಂತಹ ಸ್ಥಳಗಳ ಮೇಲೆ ಸೂಕ್ತ ನಿಗಾ ವಹಿಸಿ ಅವಶ್ಯಕತೆಗೆ ಅನುಗುಣವಾಗಿ ಹೆಚ್ಚಿನ ರಕ್ಷಣೆಯನ್ನು ಒದಗಿಸಿ ಅವರುಗಳಿಗೆ ಯಾವುದೇ ಭಯ–ಭೀತಿ ಇಲ್ಲದೆ ಮತ ಚಲಾಯಿಸಲು ಅನುವು ಮಾಡಿಕೊಡತಕ್ಕದ್ದು.
20. ಅಂತರ್ ರಾಜ್ಯ ಗಡಿ ಭಾಗಗಳಲ್ಲಿ ಹೆಚ್ಚಿನ ನಿಗಾ ವಹಿಸುವುದು. ಜಿಲ್ಲಾ ದಂಡಾಧಿಕಾರಿಗಳು ಶಸ್ತ್ರಾಸ್ತ್ರ ಕಾಯಿದೆ ಅಡಿಯಲ್ಲಿ ಲೈಸೆನ್ಸ್‌ದಾರರು ತಮ್ಮ ತಮ್ಮ ಆಯುಧಗಳನ್ನು ಡೆಪಾಸಿಟ್ ಮಾಡಿರುವ ಬಗ್ಗೆ ದೃಢಪಡಿಸಿಕೊಳ್ಳತಕ್ಕದ್ದು ಹಾಗೂ ಶಸ್ತ್ರಾಸ್ತ್ರ ಮಾರಾಟಗಾರರು/ಡೀಲರ್ಸ್/ರಿಪೇರಿ ಮಾಡುವವರ ಮಳಿಗೆ/ಅಂಗಡಿಗಳನ್ನು ತಪಾಸಣೆ ಮಾಡುವುದು.
21. ಚುನಾವಣೆಯ ಸಮಯದಲ್ಲಿ ಸಾರ್ವಜನಿಕ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಬಾರದಂತೆ ಸುಗಮವಾಗಿ ನಡೆಸುವಲ್ಲಿ ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.
22. ಭದ್ರತೆ ಹಾಗೂ ಕಾನೂನು ಸುವ್ಯವಸ್ಥೆಗೆ, ಸಾರ್ವಜನಿಕ ನೆಮ್ಮದಿಗೆ ಭಂಗ ಉಂಟಾಗುವ ಸನ್ನಿವೇಶಗಳಲ್ಲಿ ಭಾರತೀಯ ದಂಡ ಸಂಹಿತೆಯಡಿಯಲ್ಲಿ ಸೆಕ್ಯೂರಿಟಿ ಸೆಕ್ಷನ್ಸ್‌ಗಳು ದಾಖಲಿಸಿದ್ದಲ್ಲಿ, ಅಂತಹುಗಳ ಮೇಲೆ ಜಿಲ್ಲಾ ದಂಡಾಧಿಕಾರಿಗಳು/ಉಪ ವಿಭಾಗೀಯ/ತಾಲ್ಲೂಕು ದಂಡಾಧಿಕಾರಿಗಳು ಕೂಡಲೇ ನಿಯಮಾನುಸಾರ ಕ್ರಮ ಜರುಗಿಸತಕ್ಕದ್ದು.
23. ಚುನಾವಣೆ ಮುಗಿಯುವವರೆಗೆ ಯಾವುದೇ ರೌಡಿಶೀಟ್‌ನ್ನು ಮುಕ್ತಾಯ ಮಾಡಬಾರದು.
24. ಚುನಾವಣೆ ಸಂಬಂಧ ಪ್ರಮುಖ ಕಾರ್ಯಕ್ರಮಗಳ ವಿಡಿಯೋ ತೆಗೆದುಕೊಳ್ಳುವುದು.

ಈ ಸೂಚನೆಗಳನ್ನು ಯಾವುದೇ ಲೋಪಗಳಿಗೆ ಅವಕಾಶ ನೀಡದಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಎಸ್.ಕೆ. ಪಟ್ಟನಾಯಕ್**

PR. 204 ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,

SC-150 ಒಳಾಡಳಿತ ಇಲಾಖೆ.

## HOME SECRETARIAT

**Sub :** General Elections 2014-Constitution of State Level Co-ordination Group-reg.

**PREAMBLE :**

The Government of India in their fax message No. III-11040/3/2014-G (Vol-III) dt: 25-02-2014 have requested the Government of Karnataka to constitute a State Level Co-ordination Group headed by an Officer not below the rank of Inspector General of Police of the State for better co-ordination and proper liaison for deployment of CAPFs and SAPs/IRBNS in connection with the ensuring General Elections 2014. The Government have examined the proposal and hence the Order.

**GOVERNMENT ORDER NO. HD 72 SST 2014, BANGALORE, DATED: 01-03-2014**

In the circumstances mentioned above the State Government constitutes a state Level Co-ordination Group and nominates the following officers as Nodal Officers for General Elections 2014.

| | |
|---|---|
| 1. Sri M.N. Reddi, IPS<br>Additional Director General of Police (Law and Order),<br>Karnataka<br>Nodal Officer for the General Elections on behalf of the Police Department | Ph. Office : 080-22211834<br>: 080-22942103<br>Mobile : 9480800005<br>Office Address : O/o the Director General and Inspector General of Police No. 2, N.T.Road, Bangalore-560001 |
| 2. Sri N. Shivakumar, IPS<br>IGP (P&M)<br>Nodal Officer for Monitoring Election Expenditure for the forthcoming General Elections | Ph. Office : 080-22212400<br>: 080-22942249<br>Mobile : 9480800033<br>Office Address : O/o the Director General and Inspector General of Police No. 2, N.T.Road, Bangalore-560001 |
| 3. Smt Malini Krishnamoorthy, IPS<br>IGP (KSRP)<br>Nodal Officer for Deployment of CPMFs for the General Elections in the Police Department | Ph. Office : 080-22211424<br>: 080-22942247<br>Mobile : 9480800025<br>Office Address : O/o the Director General and Inspector General of Police Karnataka State 6th Floor, No. 2, N.T.Road, Bangalore-560001 |
| 4. Sri N. Satheesh Kumar, IPS<br>Additional IGP (General),<br>Supervision of work related to the Deployment of the Civil/Home Guard | Ph. Office : 080-22215641<br>: 080-25340297(R)<br>Mobile : 9448469727<br>Office Address : O/o the Director General and Inspector General of Police Karnataka State 6th Floor, No. 2, N.T.Road, Bangalore-560001 |

2. The Group shall coordinate deployment of CAPFs in connection with the Elections and ensure timely induction and de-induction and also assist in providing necessary accomodation, transport and other logistic support to the forces.

3. The Director General & Inspector General of Police, Karnataka, Bangalore shall arrange sufficient accommodation with adequate furniture, photocopies, fax machine, telephone with STD facility and other Logistics necessary for efficient and effective functioning of the Group.

By Order and in the name of the Governor of Karnataka,

**S.K. PATTANAYAK, IAS**

Additional Chief Secretary to Government,

Home Department.

**P.R. 205**
**S.C. 100**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬಿಜಾಪುರ ವಿಮಾನ ನಿಲ್ದಾಣ ಅಭಿವೃದ್ಧಿ – ಅಭಿವೃದ್ಧಿದಾರರು M/s. Marg Limited ಯೋಜನೆ ನಿರ್ವಹಣೆಗೆ ಸಲ್ಲಿಸಿರುವ ಬ್ಯಾಂಕ್ ಗ್ಯಾರಂಟಿ ರೂ.2.50 ಕೋಟಿಗಳನ್ನು ನಗದಿಕರಿಸಿದ್ದು, ಡಿ.ಡಿ.ಯನ್ನು ಖಜಾನೆಗೆ ಜಮಾ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 166 ರಾಅವಿ 2013 ದಿನಾಂಕ 10.01.2014.

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 16 Exp–1/14, ದಿ: 06.01.2014.

**ಪ್ರಸ್ತಾವನೆ:**

ಬಿಜಾಪುರದಲ್ಲಿ ವಿಮಾನ ನಿಲ್ದಾಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದ (ಪಿಪಿಪಿ) ಆಧಾರದ ಮೇಲೆ ನಿರ್ಮಿಸಲು ದಿ: 23.03.2007ರಲ್ಲಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ವಿಮಾನ ನಿಲ್ದಾಣದ ಯೋಜನಾ ಅಭಿವೃದ್ಧಿಗಾಗಿ M/s. Marg Ltd ಸಂಸ್ಥೆಯನ್ನು ಆಯ್ಕೆ ಮಾಡಿ ಅವರೊಂದಿಗೆ ಯೋಜನಾ ಒಪ್ಪಂದವನ್ನು ದಿ: 18.01.2010 ರಂದು ಸಹಿ ಮಾಡಲಾಗಿದೆ, ಯೋಜನಾ ಒಪ್ಪಂದದ ಅನುಸಾರ ವಿಮಾನ ನಿಲ್ದಾಣದ ಭೂಮಿಯನ್ನು ಅಭಿವೃದ್ಧಿದಾರರಿಗೆ ಹಸ್ತಾಂತರಿಸಿದ ದಿನಾಂಕದಿಂದ 24 ತಿಂಗಳುಗಳ ಒಳಗಾಗಿ ಪೂರ್ಣಗೊಳಿಸಬೇಕಾಗಿದೆ. ಈ ಯೋಜನೆಯ ಅಭಿವೃದ್ಧಿಗಾಗಿ ಅಭಿವೃದ್ಧಿದಾರರಾದ M/s. Marg Ltd ರವರಿಂದ ರೂ. 2.50 ಕೋಟಿಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆಯಲಾಗಿತ್ತು. ಅಭಿವೃದ್ಧಿದಾರರು ನಿಗಧಿತ ಸಮಯದಲ್ಲಿ ಯೋಜನೆಯನ್ನು ಪೂರ್ಣಗೊಳಿಸಲು ವಿಫಲವಾದುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಯೋಜನಾ ಒಪ್ಪಂದವನ್ನು ರದ್ದುಗೊಳಿಸಿ ಅಭಿವೃದ್ಧಿದಾರರು ನೀಡಿದ ಬ್ಯಾಂಕ್ ಗ್ಯಾರಂಟಿ ರೂ. 2.50 ಕೋಟಿಗಳನ್ನು ನಗದಿಕರಿಸಲಾಗಿದೆ, ಸದರಿ ಡಿ.ಡಿ. ಸಂಖ್ಯೆ: 205760 ರೂ. 90.00 ಲಕ್ಷ, ಡಿ.ಡಿ. ಸಂಖ್ಯೆ: 205761 ರೂ. 90.00 ಲಕ್ಷ ಮತ್ತು ಡಿ.ಡಿ. ಸಂಖ್ಯೆ: 205762 ರೂ. 70.00 ಲಕ್ಷಗಳ ಒಟ್ಟು 3 ಡಿ.ಡಿ.ಗಳನ್ನು (ರೂ. 90ಲಕ್ಷ +90ಲಕ್ಷ +70ಲಕ್ಷ = 2.50 ಕೋಟಿ) ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಪಡೆಯಲಾಗಿದೆ.

2) ಮೇಲೆ ಓದಲಾದ ಕ್ರ.ಸಂ. (2) ರ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಮುಟ್ಟುಗೋಲು ಹಾಕಿಕೊಂಡ ರೂ.2.50 ಕೋಟಿಗಳನ್ನು ಲೆಕ್ಕ ಶೀರ್ಷಿಕೆ 8443–00–103–0–06 ರಲ್ಲಿ ರಾಜ್ಯ ಹುಜೂರ್ ಖಜಾನೆಗೆ ಜಮಾ ಮಾಡುವಂತೆ ಸೂಚಿಸಿರುತ್ತದೆ.

3) ಅದರಂತೆ ಈ ಕೆಳಕಂಡಂತೆ ಆದೇಶವನ್ನೂ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮೂಅಇ 53 ರಾಅವಿ 2010, ಬೆಂಗಳೂರು, ದಿನಾಂಕ: 23–01–2014.**

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಬಿಜಾಪುರ ವಿಮಾನ ನಿಲ್ದಾಣ ಅಭಿವೃದ್ಧಿ ಪಡಿಸಲು ಆಯ್ಕೆಗೊಂಡ M/s. Marg Ltd ರವರು ಸರ್ಕಾರಕ್ಕೆ ನೀಡಿದ್ದ ಬ್ಯಾಂಕ್ ಗ್ಯಾರಂಟಿ ರೂ.2.50 ಕೋಟಿಗಳನ್ನು (ರೂಪಾಯಿ ಎರಡುವರೆ ಕೋಟಿಗಳು ಮಾತ್ರ) ನಗದಿಕರಿಸಿ ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಪಡೆಯಲಾಗಿರುವ ಡಿ.ಡಿ. ಸಂಖ್ಯೆ: 205760 ರೂ. 90.00 ಲಕ್ಷ, ಡಿ.ಡಿ. ಸಂಖ್ಯೆ: 205761 ರೂ. 90.00 ಲಕ್ಷ ಮತ್ತು ಡಿ.ಡಿ. ಸಂಖ್ಯೆ: 205762 ರೂ. 70.00 ಲಕ್ಷಗಳ ಒಟ್ಟು 3 ಡಿ.ಡಿ.ಗಳ ಮೊತ್ತ (ರೂ. 90ಲಕ್ಷ +90ಲಕ್ಷ +70ಲಕ್ಷ = 2.50 ಕೋಟಿ) ರೂ. 2.50 ಕೋಟಿಗಳನ್ನು ಲೆಕ್ಕ ಶೀರ್ಷಿಕೆ 8443–00–103–0–06 ರಲ್ಲಿ ರಾಜ್ಯ ಹುಜೂರ್ ಖಜಾನೆಯಲ್ಲಿ ಜಮಾ ಮಾಡಲು ಸರ್ಕಾರ ಮಂಜೂರಾತಿಯನ್ನು ನೀಡಲಾಗಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. FD 16 Exp-1/14, ದಿ: 06.01.2014 ರ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಬಿನ್ ವನರಾಜ್. ಜೆ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ.),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**PR.154**

**SC.50**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬೆಳಗಾಂ ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಹಣ ಪಾವತಿಸುವ ಬಗ್ಗೆ.

**ಓದಲಾಗಿದೆ:** 1. ಬೆಳಗಾವಿ ವಿಮಾನ ನಿಲ್ದಾಣ ನಿರ್ದೇಶಕರು (ಪ್ರ.), ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ, ಬೆಳಗಾಂ ವಿಮಾನ ನಿಲ್ದಾಣ, ಇವರ ಪತ್ರ ಸಂ: AAI/ BM/AIC/ LM/ 2012–13/ 1449–51, ದಿನಾಂಕ: 11–03–2013.

2. ಸರ್ಕಾರದ ಪತ್ರ ಸಂಖ್ಯೆ : ಮೂಅಇ 38 ರಾಅವಿ 2013 ದಿನಾಂಕ : 23.03.2013.

3. ಅಸಿಸ್ಟೆಂಟ್ ಜನರಲ್ ಮ್ಯಾನೇಜರ್ (COM) ಸ್ಟೇಷನ್ ಇನ್‌ಚಾರ್ಜ್, ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ, ಬೆಳಗಾಂ ವಿಮಾನ ನಿಲ್ದಾಣ, ಇವರ ಪತ್ರ ಸಂಖ್ಯೆ : AAI/ BMFA/ 10/ 237 – 38, ದಿನಾಂಕ : 26.05.2013.

4. ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 54 ಬಿಆರ್‌ಎಸ್ 2013, ಬೆಂಗಳೂರು, ದಿನಾಂಕ: 23.12.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಬೆಳಗಾವಿ ವಿಮಾನ ನಿಲ್ದಾಣ Assistant General Manager (COM) Station In charge, ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ ಇವರು ಸರ್ಕಾರಕ್ಕೆ ಬರೆದ ಪತ್ರದಲ್ಲಿ ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಕರ್ನಾಟಕ ಸರ್ಕಾರ ಮಾಡಿಕೊಂಡಿರುವ ಒಪ್ಪಂದದ ಅನುಸಾರ ಒಪ್ಪಂದದ ದಿನಾಂಕದಿಂದ 5 ವರ್ಷಗಳ ಅವಧಿಗೆ ವಿದ್ಯುತ್‌ಚ್ಛಕ್ತಿ ಬಳಕೆ ಬಿಲ್ಲನ್ನು ರಾಜ್ಯ ಸರ್ಕಾರ

ಭರಿಸಬೇಕಿದ್ದು, ಈವರೆವಿಗೂ ಅಂದರೆ (ದಿನಾಂಕ: 01.02.2012ರಿಂದ ದಿನಾಂಕ: 31.03.2013ರವರೆಗೆ) ಬಿಲ್ಲನ್ನು ಈಗಾಗಲೇ ಪಾವತಿಸಿದ್ದು, ಸದರಿ ಮೊತ್ತವನ್ನು ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರಕ್ಕೆ ಮರುಪಾವತಿಸುವಂತೆ ಕೋರಿರುತ್ತಾರೆ.

2. ಹಾಲಿ ಇರುವ ಬೆಳಗಾಂ ವಿಮಾನ ನಿಲ್ದಾಣದ ಉನ್ನತೀಕರಣಕ್ಕಾಗಿ ರಾಜ್ಯ ಸರ್ಕಾರವು ದಿನಾಂಕ: 19-01-2012ರಂದು ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಅನುಸಾರ ಒಪ್ಪಂದದ ದಿನಾಂಕದಿಂದ 5 ವರ್ಷಗಳವರೆಗೆ ವಿದ್ಯುಚ್ಛಕ್ತಿ ಬಳಕೆ ಬಿಲ್ಲನ್ನು ರಾಜ್ಯ ಸರ್ಕಾರದಿಂದ ಭರಿಸಬೇಕಾಗಿರುತ್ತದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ. (2)ರ ಸರ್ಕಾರದ ಪತ್ರದಲ್ಲಿ ಬೆಳಗಾಂ ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಳಕೆಗೆ ಸಂಬಂಧಿಸಿದಂತೆ ಫೆಬ್ರವರಿ 2012ರಿಂದ ವಿದ್ಯುಚ್ಛಕ್ತಿ ಬಳಸಿದ ಬಿಲ್ಲನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು.

4. ಮೇಲೆ ಓದಲಾದ ಕ್ರಮ ಸಂಖ್ಯೆ. (3)ರ ಪತ್ರದಲ್ಲಿ ಅಸಿಸ್ಟೆಂಟ್ ಜನರಲ್ ಮ್ಯಾನೇಜರ್, ಸ್ಟೇಷನ್ ಇನ್‌ಚಾರ್ಜ್, ಬೆಳಗಾಂ ವಿಮಾನ ನಿಲ್ದಾಣ, ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ, ಬೆಳಗಾವಿ ಇವರು ಫೆಬ್ರವರಿ 2012ರಿಂದ ಮಾರ್ಚ್ 2013ರವರೆಗೆ ಪಾವತಿಸಿರುವ ವಿದ್ಯುಚ್ಛಕ್ತಿ ಬಿಲ್ಲುಗಳನ್ನು ಸರ್ಕಾರಕ್ಕೆ ಸಲ್ಲಿಸಿ ಈ ಅವಧಿಯಲ್ಲಿ ಪಾವತಿಸಿದ ಒಟ್ಟು ಮೊತ್ತ ರೂ.24,20,558-00 (ಇಪ್ಪತ್ತ ನಾಲ್ಕು ಲಕ್ಷಗಳ ಇಪ್ಪತ್ತು ಸಾವಿರದ ಐದುನೂರ ಐವತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

5. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ಮೂಅಇ 38 ರಾಅವಿ 2013, ಬೆಂಗಳೂರು, ದಿನಾಂಕ : 23-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾಂ ವಿಮಾನ ನಿಲ್ದಾಣದ ಫೆಬ್ರವರಿ 2012ರಿಂದ ಮಾರ್ಚ್ 2013ರವರೆಗಿನ ವಿದ್ಯುಚ್ಛಕ್ತಿ ಬಳಕೆ ಬಿಲ್ಲಿನ ಮೊತ್ತ ರೂ. 24,20,558-00 (ಇಪ್ಪತ್ತ ನಾಲ್ಕು ಲಕ್ಷಗಳ ಇಪ್ಪತ್ತು ಸಾವಿರದ ಐದುನೂರ ಐವತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಮೊತ್ತವನ್ನು 2013-14ನೇ ಸಾಲಿನ ಈ ಉದ್ದೇಶಕ್ಕಾಗಿ ಸೂಚಿಸಿರುವ ಲೆಕ್ಕ ಶೀರ್ಷಿಕೆ **"3451-00-090-1-11- Development of Minor Airports – 071 Building Expenses"** ಇದರಡಿಯಲ್ಲಿ ಲಭ್ಯ ಮಾಡಿರುವ ಹೆಚ್ಚುವರಿ ಅನುದಾನದಿಂದ ಭರಿಸತಕ್ಕದ್ದು.

3. ಈ ಹಣವನ್ನು ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂ ಇವರು ಜಿಲ್ಲಾ ಖಜಾನೆ ಬೆಳಗಾಂ ಇಲ್ಲಿ ಡಿ.ಸಿ. ಬಿಲ್ ಮೂಲಕ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಟಿ.ಎನ್.ಎಂ.ಸಿ, ಬೆಂಗಳೂರು, ಇವರು ಈ ಮೊತ್ತವನ್ನು ಬೆಳಗಾಂ ಜಿಲ್ಲಾಧಿಕಾರಿಗಳ ಖಾತೆಗೆ ಅಪ್‌ಲೋಡ್ ಮಾಡುವುದು. ಈ ಹಣವನ್ನು ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರ ಡಿ.ಡಿ. ಮೂಲಕ Payable at Chennai ಇವರಿಗೆ ಜಮಾ ಮಾಡಿ ಸ್ವೀಕೃತಿ ಪಡೆದು ಸ್ವೀಕೃತಿಯನ್ನು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ.

4. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2013 ದಿನಾಂಕ: 10.05.2013 ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ : ಆಇ 54 ಬಿಆರ್‌ಎಸ್ 2013, ದಿನಾಂಕ:23.12.2013ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಬಿನ್ ವನರಾಜ್. ಜೆ**

**PR.155** ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ.),

**SC.30** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ವಿಮಾನ ನಿಲ್ದಾಣದ ನೀರು ಪೂರೈಕೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 32 ರಾಅವಿ 2012 ದಿನಾಂಕ: 07-09-2012.

2. ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಇವರ ಪತ್ರ ದಿನಾಂಕ: 16.08.2013 ಮತ್ತು 10.10.2013.

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರಿ ಆದೇಶದಲ್ಲಿ ಶಿವಮೊಗ್ಗ ವಿಮಾನ ನಿಲ್ದಾಣದ ನೀರು ಪೂರೈಕೆಗಾಗಿ ಮತ್ತೂರು ಗ್ರಾಮದ ಬಳಿ ತುಂಗಾ ನದಿಯಿಂದ ವಿಮಾನ ನಿಲ್ದಾಣದ ನಿವೇಶನದವರೆಗೆ ನೀರು ಸರಬರಾಜು ಮಾಡುವ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಇದಕ್ಕಾಗಿ ವಿಸ್ತೃತ ಯೋಜನಾ ವರದಿ ತಯಾರಿಸಲು ರೂ.5.00 ಲಕ್ಷಗಳನ್ನು (ರೂಪಾಯಿ ಐದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ವರದಿ ಮಾಡಿ ಕ್ರ.ಸಂ. (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆಯಾಗಿರುವ ಅನುದಾನವನ್ನು 2012-13ನೇ ಸಾಲಿನಲ್ಲಿ ಡ್ರಾ ಮಾಡಲು ಸಾಧ್ಯವಾಗಿರುವುದಿಲ್ಲ, ಆದ್ದರಿಂದ ಈ ಬಗ್ಗೆ ನೀಡಿರುವ ಕಾರಣಗಳನ್ನು ಹಾಗೂ ಪತ್ರಗಳೊಂದಿಗೆ ಸಲ್ಲಿಸಿರುವ ನಾನ್ ಡ್ರಾಯಲ್ ಸರ್ಟಿಫಿಕೇಟ್ ಅನ್ನು ಪರಿಗಣಿಸಿ ರೂ. 5.00 ಲಕ್ಷಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಮೂಅಇ 32 ರಾಅವಿ 2012, ಬೆಂಗಳೂರು ದಿನಾಂಕ: 21-01-2014.**

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಶಿವಮೊಗ್ಗ ವಿಮಾನ ನಿಲ್ದಾಣದ ನೀರು ಪೂರೈಕೆಗಾಗಿ ಮತ್ತೂರು ಗ್ರಾಮದ ಬಳಿ ತುಂಗಾ ನದಿಯಿಂದ ವಿಮಾನ ನಿಲ್ದಾಣದ ನಿವೇಶನದವರೆಗೆ ನೀರು ಸರಬರಾಜು ಮಾಡುವ ಕಾಮಗಾರಿಗೆ ವಿಸ್ತೃತ ಯೋಜನಾ ವರದಿ (DPR) ತಯಾರಿಸಲು ರೂ.5.00 ಲಕ್ಷಗಳನ್ನು (ರೂಪಾಯಿ ಐದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2) ಈ ಮೊತ್ತವನ್ನು 2013-14 ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465-01-190-1-05 – (P) 211 ರಡಿಯಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಿಸಿರುವ ರೂ.1300.00 ಲಕ್ಷಗಳ ಮೊತ್ತದಿಂದ ಭರಿಸತಕ್ಕದ್ದು.

3) ಈ ಉದ್ದೇಶಕ್ಕೆ ಈಗಾಗಲೇ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ: ಮೂಅಇ 32 ರಾಅವಿ 2012, ದಿ: 07.09.2012ರನ್ನು ರದ್ದುಗೊಳಿಸಲಾಗಿದೆ.

4) ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರು ಜಿಲ್ಲಾ ಖಜಾನೆ, ಶಿವಮೊಗ್ಗ, ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ., ಬೆಂಗಳೂರು, ಇವರು ಈ ಮೊತ್ತವನ್ನು ಶಿವಮೊಗ್ಗ ಜಿಲ್ಲಾಧಿಕಾರಿಗಳ ಖಾತೆಗೆ ಅಪ್ ಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತ ಪ್ರಮಾಣ ಪತ್ರವನ್ನು ಶಿವಮೊಗ್ಗ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5) ಈ ಆದೇಶವನ್ನು ಸರ್ಕಾರಿ ಆದೇಶ ಸಂ: ಆಇ 1 ಟಿಎಫ್‌ಪಿ 2013, ದಿನಾಂಕ:10.05.2013ರಲ್ಲಿ ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಬಿನ್ ವನರಾಜ್. ಜೆ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ.),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**PR.156**

**SC.50**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಸರಹದ್ದಿನಲ್ಲಿ ಪೊಲೀಸ್ ಠಾಣೆ ನಿರ್ಮಿಸಲು ಬಿಡುಗಡೆ ಮಾಡಲಾಗಿದ್ದ ರೂ.1.00 ಕೋಟಿ ಮತ್ತು ಅದರ ಬಡ್ಡಿಯನ್ನು ಖಜಾನೆಗೆ ಸಂದಾಯ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ಮೂಅಇ 142 ರಾಅವಿ 2007 ದಿ: 16.05.2008.
2. ಡೆಪ್ಯೂಟಿ ಜನರೆಲ್ ಮ್ಯಾನೇಜರ್, KSIIDC ರವರ ಪತ್ರ ಸಂಖ್ಯೆ: DGM (IPD-1)/ 1254/ 2013–14, ದಿ:05.09.2013.
3. ಸರ್ಕಾರದ ಪತ್ರ ಸಂಖ್ಯೆ.ಮೂಅಇ 61 ರಾಅವಿ 2012 ದಿ: 08.10.2013.
4. ಜನರೆಲ್ ಮ್ಯಾನೇಜರ್ (ಪ್ರಭಾರ) KSIIDC ಇವರ ಪತ್ರ ಸಂಖ್ಯೆ: GM (IPD)/ 1787/ 2013–14, ದಿ:28.11.2013.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 1522 Exp-1/13, ದಿ:13.01.2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಒಂದು ಆಧುನಿಕ ಪೊಲೀಸ್ ಠಾಣೆ ನಿರ್ಮಿಸಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಇವರಿಗೆ ರೂ.1.00 ಕೋಟಿ (ರೂಪಾಯಿ ಒಂದು ಕೋಟಿ ಮಾತ್ರ)ಗಳನ್ನು ಬಿಡುಗಡೆ ಮಾಡಲಾಗಿದೆ.

2) ಮೇಲೆ ಓದಲಾದ ಕ್ರ.ಸಂ. (2) ರ ಪತ್ರದಲ್ಲಿ ಡೆಪ್ಯೂಟಿ ಜನರೆಲ್ ಮ್ಯಾನೇಜರ್, KSIIDC ಯವರು ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಈಗಾಗಲೇ ಒಂದು ಪೊಲೀಸ್ ಠಾಣೆಯನ್ನು ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ನಿಯಮಿತ ಇವರು ತಮ್ಮ ವೆಚ್ಚದಲ್ಲಿ ನಿರ್ಮಾಣ ಮಾಡಿರುವುದರಿಂದ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಇವರಿಗೆ ಬಿಡುಗಡೆ ಮಾಡಲಾದ ರೂ.1.00 ಕೋಟಿ ಹಣವನ್ನು ಸರ್ಕಾರಕ್ಕೆ ಹಿಂದಿರುಗಿಸುವಂತೆ ಸೂಚಿಸಲು ಕೋರಿರುತ್ತಾರೆ.

3) ಮೇಲೆ ಓದಲಾದ ಕ್ರ.ಸಂ. (3) ರ ಸರ್ಕಾರದ ಪತ್ರದಲ್ಲಿ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಈಗಾಗಲೇ ಪೊಲೀಸ್ ಠಾಣೆ ನಿರ್ಮಿಸಿರುವುದರಿಂದ ಈ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾದ ರೂ.1.00 ಕೋಟಿ ಹಣವನ್ನು ಅದರ ಬಡ್ಡಿಯೊಂದಿಗೆ ಸರ್ಕಾರಕ್ಕೆ ಜಮಾ ಮಾಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಇವರಿಗೆ ಕೋರಲಾಗಿತ್ತು.

4) ಮೇಲೆ ಓದಲಾದ ಕ್ರ.ಸಂ. (4) ರ ಪತ್ರದಲ್ಲಿ ಜನರೆಲ್ ಮ್ಯಾನೇಜರ್ (ಪ್ರಭಾರ), KSIIDC ಯವರು ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಹಣವನ್ನು ಬಡ್ಡಿಯೊಂದಿಗೆ ರೂ.1,14,45,731/– (ಒಂದು ಕೋಟಿ ಹದಿನಾಲ್ಕು ಲಕ್ಷ ನಲವತ್ತೈದು ಸಾವಿರದ ಏಳನೂರ ಮೂವತ್ತೊಂದು ರೂಪಾಯಿ ಮಾತ್ರ)ಗಳನ್ನು ಹಿಂದಿರುಗಿಸಿದ್ದು, ಈ ಹಣವನ್ನು ಪ್ರತ್ಯೇಕ ಖಾತೆಯಲ್ಲಿ ಇರಿಸಲಾಗಿದ್ದು ಮುಂದಿನ ಕ್ರಮದ ಬಗ್ಗೆ ಸರ್ಕಾರದ ಸಲಹೆಯನ್ನು ಕೋರಿರುತ್ತಾರೆ. ಈ ಬಗ್ಗೆ ಆರ್ಥಿಕ ಇಲಾಖೆಯ ಸಲಹೆಯನ್ನು ಪಡೆಯಲಾಗಿತ್ತು.

5) ಮೇಲೆ ಓದಲಾದ ಕ್ರ.ಸಂ. (5)ರ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ರೂ.1,14,45,731/– ಗಳನ್ನು ಲೆಕ್ಕ ಶೀರ್ಷಿಕೆ 5465–01–190–2–90 (plan deduct receipt and Recoveries on capital account ಗೆ ಜಮಾ ಮಾಡುವಂತೆ ಸೂಚಿಸಿದ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮೂಅಇ 61 ರಾಅವಿ 2012, ಬೆಂಗಳೂರು, ದಿನಾಂಕ: 28–01–2014.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಇವರು KSIIDC ಗೆ ನೀಡಿರುವ ಹಣ ರೂ.1,14,45,731/– ಗಳನ್ನು ಲೆಕ್ಕ ಶೀರ್ಷಿಕೆ 5465–01–190–2–90 (plan) deduct receipt and Recoveries on capital account ರಲ್ಲಿ ಜಮಾ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. FD 1522 Exp-1/13, ದಿ: 13.01.2014 ರ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಬಿನ್ ವನರಾಜ್. ಜೆ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ.),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**PR.157**

**SC.50**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಮೆಟ್ರಿಕ್-ನಂತರದ ವಿದ್ಯಾರ್ಥಿಗಳಿಗೆ "ಶುಲ್ಕ ವಿನಾಯಿತಿ" ಪರಿಷ್ಕೃತ ಕಾರ್ಯಕ್ರಮ ಮತ್ತು ಇದರ ಅನುಷ್ಠಾನದ ಮಾರ್ಗಸೂಚಿಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ.ಸಕಇ 201 ಬಿಎಂಎಸ್ 2012, ದಿನಾಂಕ: 23.06.2012.

2. ಸರ್ಕಾರದ ಆದೇಶ ಸಂ.ಸಕಇ 357 ಬಿಎಂಎಸ್ 2012, ದಿನಾಂಕ: 7.11.2012

3. ಸರ್ಕಾರದ ಆದೇಶ ಸಂ.ಸಕಇ 357 ಬಿಎಂಎಸ್ 2012, ದಿನಾಂಕ: 22.11.2012

4. ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಪರಿಷ್ಕೃತ ಆದೇಶ ಸಂಖ್ಯೆ 11014/21/2006-ಬಿಸಿ-1 ದಿನಾಂಕ:11.08.2011

5. ಸರ್ಕಾರದ ಆದೇಶ ಸಂ.ಬಿಸಿಡಬ್ಲ್ಯೂ 518 ಬಿಎಂಎಸ್ 2013, ದಿನಾಂಕ 03.09.2013

6. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಪ್ರಸ್ತಾವನೆ ಸಂಖ್ಯೆ:ಹಿಂವಕಇ/ವನಿಶಾ-2/ಸಿಆರ್-55/2013-14, ದಿನಾಂಕ: 24.07.2013

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶಗಳಲ್ಲಿ ಮೆಟ್ರಿಕ್-ನಂತರದ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ ಮಂಜೂರು ಮಾಡುವ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿತ್ತೆಂದೂ, ಓದಲಾದ (4)ರ, ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಕಾರ್ಯಕ್ರಮದಲ್ಲಿ ನಿಗದಿಪಡಿಸಿರುವ ಷರತ್ತುಗಳು ಪ್ರಸ್ತುತ ಸನ್ನಿವೇಶಕ್ಕೆ ಅತ್ಯಂತ ಸೂಕ್ತವಾಗಿರುತ್ತವೆಯೆಂದೂ, ರಾಜ್ಯ ಸರ್ಕಾರದ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಮತ್ತು ಭಾರತ ಸರ್ಕಾರದ ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಏಕರೂಪವಾಗಿ ಶುಲ್ಕ ಮರುಪಾವತಿ ಕಾರ್ಯಕ್ರಮವನ್ನು ಜಾರಿಗೊಳಿಸುವುದು ಸೂಕ್ತವೆಂದೂ, 2013-14ನೇ ಸಾಲಿನಲ್ಲಿ ಈ ಕಾರ್ಯಕ್ರಮವನ್ನು ನೇರ ನಗದು ವರ್ಗಾವಣೆ ಸೌಲಭ್ಯದಡಿ (ಡಿ.ಬಿ.ಟಿ) ಮಂಜೂರು ಮಾಡಲು ಉದ್ದೇಶಿಸಿದ್ದು, ಇದಕ್ಕಾಗಿ ಶುಲ್ಕ ವಿನಾಯಿತಿ ಸೌಲಭ್ಯವನ್ನು ಕೆಲವೇ ಶುಲ್ಕಗಳಿಗೆ ಸೀಮಿತಗೊಳಿಸಿ, ಅಂಥ ವಿದ್ಯಾರ್ಥಿಗಳಿಗೆ **ಶುಲ್ಕ ವಿನಾಯಿತಿ ನೀಡುವುದರ ಜೊತೆಗೆ** Readers charges ಅನ್ನು ಸಹ ಮಂಜೂರು ಮಾಡುವ ಕುರಿತಂತೆ, ಪರಿಷ್ಕೃತ ಕಾರ್ಯಕ್ರಮ ಹಾಗೂ ಅನುಷ್ಠಾನದ ಮಾರ್ಗಸೂಚಿಗಳನ್ನು ಹೊರಡಿಸಬೇಕೆಂದೂ ಉಲ್ಲೇಖ (6)ರಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಇವರು ಏಕಕಡತದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 589 ಬಿಎಂಎಸ್ 2013, ಬೆಂಗಳೂರು ದಿನಾಂಕ: 05.10.2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ (1) ಮತ್ತು (2)ರಲ್ಲಿನ ಸರ್ಕಾರದ ಆದೇಶಗಳನ್ನು ನಿರಸನಗೊಳಿಸಿ, ಹಿಂದುಳಿದ ವರ್ಗಗಳ ಮೆಟ್ರಿಕ್-ನಂತರದ ವಿದ್ಯಾರ್ಥಿಗಳಿಗೆ "ಶುಲ್ಕ ಮರುಪಾವತಿ" ಕಾರ್ಯಕ್ರಮವನ್ನು ಪರಿಷ್ಕರಿಸಿ, ಈ ಆದೇಶಕ್ಕೆ ಲಗತ್ತಿಸಿರುವ **ಅನುಬಂಧ-1**ರಲ್ಲಿರುವ ಮಾರ್ಗಸೂಚಿಗಳಂತೆ ಜಾರಿಗೊಳಿಸಲು ಆದೇಶಿಸಿದೆ. ಗುಂಪುವಾರು ಕೋರ್ಸುಗಳ ವಿವರಗಳನ್ನು **ಅನುಬಂಧ-2**ರಲ್ಲಿ ತೋರಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಜಿಲ್ಲಾವಲಯ ಯೋಜನೇತರ ಲೆಕ್ಕಶೀರ್ಷಿಕೆ 2225-00-103-0-28 "ಇತರೆ ಹಿಂದುಳಿದ ವರ್ಗಗಳಿಗೆ ರಿಯಾಯಿತಿಗಳು", ರಾಜ್ಯವಲಯ ಯೋಜನೆ ಲೆಕ್ಕಶೀರ್ಷಿಕೆ 2225-03-277-02-51 ರಡಿ ಹಾಗೂ ಭಾರತ ಸರ್ಕಾರ ನೀಡುವ Notional Allocation ಅನುದಾನವನ್ನು ಉಪಯೋಗಿಸಿಕೊಂಡು, ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ/2013, ದಿನಾಂಕ: 10.05.2013ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಹೆಚ್.ಅನಿಲ್‌ಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರಿ ಆದೇಶ ಸಂ.ಹಿಂವಕ 589 ಬಿಎಂಎಸ್ 2013, ದಿನಾಂಕ 05.10.2013ಕ್ಕೆ**

**ಅನುಬಂಧ-1**

**ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಪರಿಷ್ಕೃತ "ಶುಲ್ಕ ವಿನಾಯಿತಿ" ಕಾರ್ಯಕ್ರಮ**

(ಸಮಾಜ ಕಲ್ಯಾಣ /ಪರಿಶಿಷ್ಟ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳ ವ್ಯಾಪ್ತಿಗೆ ಬರುವ ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಸೌಲಭ್ಯಗಳನ್ನು ಪಡೆಯಲು ಅರ್ಹರಿರುವುದಿಲ್ಲ)

**I. ಯೋಜನೆಯ ಉದ್ದೇಶ:**

1. (ಅ) ಭಾರತದ ಯಾವುದೇ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳ, ಶಾಸನಬದ್ಧ ವಿಶ್ವವಿದ್ಯಾಲಯಗಳ/ ಡೀಮ್ಡ್ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ / ಸ್ಥಳೀಯ ಸಂಸ್ಥೆ/ಅನುದಾನಿತ ಸಂಸ್ಥೆಗಳು /ಮಾನ್ಯತೆ ಪಡೆದ ಅನುದಾನರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುವ ಹಿಂದುಳಿದ ವರ್ಗಗಳ ಮೆಟ್ರಿಕ್-ನಂತರದ ವಿದ್ಯಾರ್ಥಿಗಳು, ಶಿಕ್ಷಣ ಸಂಸ್ಥೆಗಳಿಗೆ ಪಾವತಿಸುವ ಶುಲ್ಕಗಳಲ್ಲಿ ರಿಯಾಯಿತಿ ನೀಡುವುದು ಮತ್ತು ಅಂಥ ವಿದ್ಯಾರ್ಥಿಗಳಿಗೆ Readers charges ಪಾವತಿಸುವುದು, ಈ ಯೋಜನೆಯ ಉದ್ದೇಶವಾಗಿದೆ.

(ಆ) ಯಾವುದೇ ಸರ್ಕಾರಿ / ಖಾಸಗಿ ಸಂಸ್ಥೆಗಳಲ್ಲಿ, ಉಚಿತ ಶಿಕ್ಷಣ ನೀಡಲಾಗುತ್ತದೆಯೋ (ಯಾವ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಂದ ಶುಲ್ಕವನ್ನು ವಸೂಲಿ ಮಾಡುವುದಿಲ್ಲವೋ) ಅಂತಹ ಸಂಸ್ಥೆಗಳಲ್ಲಿನ ವಿದ್ಯಾರ್ಥಿಗಳು ಶುಲ್ಕ ವಿನಾಯಿತಿಗೆ ಅರ್ಹರಿರುವುದಿಲ್ಲ.

(ಇ) ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದವರು, ಆನ್‌ಲೈನ್ (Online) ಮೂಲಕ ಅರ್ಜಿ ಸಲ್ಲಿಸಬೇಕು ಹಾಗೂ ಮಂಜೂರಾದ ಮೊತ್ತವನ್ನು ಆನ್‌ಲೈನ್ ಮೂಲಕ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಜಮಾ ಮಾಡಬೇಕು.

**II. ಅರ್ಹತೆ:**

1. (ಅ) ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿ ಆಗಿರಬೇಕು.

(ಆ) ಭಾರತದ ಯಾವುದೇ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳ, ಶಾಸನಬದ್ದ ವಿಶ್ವವಿದ್ಯಾಲಯಗಳ/ಡೀಮ್ಡ್ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ, ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆಗಳು / ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ – ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಾಗಿರಬೇಕು.

2. (ಅ) ಈ ಮೇಲಿನ ಸೌಲಭ್ಯ ಪಡೆಯಲು ವಿದ್ಯಾರ್ಥಿಯ, ತಂದೆ–ತಾಯಿ/ಪೋಷಕರ ಕುಟುಂಬದ, ಒಟ್ಟು ವಾರ್ಷಿಕ ವರಮಾನ (Gross Annual Income) ಈ ಕೆಳಗೆ ನಿಗದಿಪಡಿಸಿದ ಗರಿಷ್ಠ ಮಿತಿಯೊಳಗೆ ಇರಬೇಕು.

(ಆ) ಹಿಂದುಳಿದ ವರ್ಗಗಳ ಪ್ರವರ್ಗ–1 ರ ವಿದ್ಯಾರ್ಥಿಗಳಿಗೆ – ರೂ.2.50 ಲಕ್ಷ

(ಇ) ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ, ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿದ ಮತ್ತು ಎಲ್ಲಾ ಧರ್ಮಗಳ, ಜಾತಿಗಳ ಹಾಗೂ ಸಮುದಾಯಗಳ ವಿದ್ಯಾರ್ಥಿಗಳಿಗೆ – ರೂ.1.00 ಲಕ್ಷ. ಆದರೆ, ಸಮಾಜ ಕಲ್ಯಾಣ /ಪರಿಶಿಷ್ಟ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳ ವ್ಯಾಪ್ತಿಗೆ ಬರುವ ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಸೌಲಭ್ಯಗಳನ್ನು ಪಡೆಯಲು ಅರ್ಹರಿರುವುದಿಲ್ಲ.

(ಈ) ಒಂದು ಶೈಕ್ಷಣಿಕ ವರ್ಷದಲ್ಲಿ, ಯಾವುದೇ ಮೂಲದಿಂದ, ಶುಲ್ಕ ವಿನಾಯಿತಿ ಪಡೆದಿದ್ದಲ್ಲಿ, ಅಂತಹವರು ಪುನ: ಈ ಯೋಜನೆಯಡಿ ಶುಲ್ಕ ವಿನಾಯಿತಿಗೆ ಅರ್ಹರಿರುವುದಿಲ್ಲ.

3. (ಅ) ಈ ಯೋಜನೆಯಡಿ ಪ್ರಥಮ ಬಾರಿಗೆ ಸೌಲಭ್ಯವನ್ನು ಪಡೆಯಲು, ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ, ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

| | |
|---|---|
| ಪ್ರವರ್ಗ–1 & ಅಂಧ ವಿದ್ಯಾರ್ಥಿಗಳು | – 40% |
| ಪ್ರವರ್ಗ–2ಎ, 3ಎ, 3ಬಿ | – 50% |

(ಆ) ನವೀಕರಣ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಬೇಕಾಗಿದ್ದಲ್ಲಿ, ಅವರು ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ, ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

| | |
|---|---|
| ಪ್ರವರ್ಗ–1 & ಅಂಧ ವಿದ್ಯಾರ್ಥಿಗಳು | – 50% |
| ಪ್ರವರ್ಗ–2ಎ, 3ಎ, 3ಬಿ | – 60% |

(ಇ) (i) ಸೆಮಿಸ್ಟರ್ ಪದ್ದತಿ ಇರುವ ಕೋರ್ಸುಗಳಿಗೆ ಸಂಬಂಧಪಟ್ಟಂತೆ, ಆ ಶೈಕ್ಷಣಿಕ ವರ್ಷದಲ್ಲಿ ಬರುವ ಸೆಮಿಸ್ಟರುಗಳು ಎಂದರ್ಥ.

(ii) ಒಂದು ವೇಳೆ, ವೈದ್ಯಕೀಯ ಕಾರಣಗಳಿಂದಾಗಿ ಪರೀಕ್ಷೆಗೆ ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ಅಂತಹವರು, ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು.

4. (ಅ) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಅರ್ಹರಿರುವುದಿಲ್ಲ. (ಉದಾ: ಬಿ.ಎ ನಂತರ ಬಿ.ಕಾಂ, ಎಂ.ಎ (ಕನ್ನಡ) ನಂತರ ಎಂ.ಎ (ಇಂಗ್ಲೀಷ್), ಬಿ.ಎಡ್ ನಂತರ ಎಲ್.ಎಲ್.ಬಿ, ಇತ್ಯಾದಿಗಳಿಗೆ ಪ್ರವೇಶ ಪಡೆದಿದ್ದಲ್ಲಿ)

(ಆ) ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು, ಕೋರ್ಸಿನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.

(ಇ) ಕಲೆ, ವಿಜ್ಞಾನ, ಹಾಗೂ ವಾಣಿಜ್ಯ ಕೋರ್ಸುಗಳ, ಪದವಿ ಅಥವಾ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ / ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಡಿಪ್ಲೊಮ, ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ, ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಅಡಿ ಸೌಲಭ್ಯಗಳಿಗೆ ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.

(ಈ) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ, ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

5. ಮೈಸೂರು, ತುಮಕೂರು ಮತ್ತು ಧಾರವಾಡ ಜಿಲ್ಲೆಗಳಿಗೆ ಸಂಬಂಧಿಸಿದಂತೆ, 2013–14ನೇ ಸಾಲಿನಿಂದ ಈ ಸೌಲಭ್ಯವನ್ನು ಪಡೆಯಲು ಇಚ್ಛಿಸುವ ವಿದ್ಯಾರ್ಥಿಗಳು, ಕಡ್ಡಾಯವಾಗಿ ಅವರ ಹೆಸರಿನಲ್ಲಿ ಆಧಾರ್ ಸಂಖ್ಯೆಯನ್ನು ಹೊಂದಿರತಕ್ಕದ್ದು. ಇತರೆ ಜಿಲ್ಲೆಗಳ ವಿದ್ಯಾರ್ಥಿಗಳು 2014–15ನೇ ಸಾಲಿಗೆ ಆಧಾರ್ ಸಂಖ್ಯೆಯನ್ನು ಪಡೆಯುವುದು ಕಡ್ಡಾಯ.

**III. (ಅ) ವಿನಾಯಿತಿಗೆ ಅರ್ಹ ಇರುವ ಶುಲ್ಕಗಳು:**

ರಾಜ್ಯಮಟ್ಟದ ಸಮಿತಿಯು ನಿಗದಿಪಡಿಸುವ ದರಗಳಂತೆ ಈ ಕೆಳಗಿನ ಐದು ಶುಲ್ಕಗಳಿಗೆ ಮಾತ್ರ ವಿನಾಯಿತಿ ನೀಡಲಾಗುವುದು.

**i)** ಬೋಧನಾ ಶುಲ್ಕ

**ii)** ಪ್ರಯೋಗಾಲಯ ಶುಲ್ಕ (ಯಾವ ಕೋರ್ಸುಗಳಲ್ಲಿ ಪ್ರಯೋಗಾಲಯ ಕಡ್ಡಾಯವಿದೆಯೋ ಆ ಕೋರ್ಸುಗಳಿಗೆ ಮಾತ್ರ)

**iii)** ಪರೀಕ್ಷಾ ಶುಲ್ಕ

**iv)** ಕ್ರೀಡಾ ಶುಲ್ಕ

**v)** ಗ್ರಂಥಾಲಯ ಶುಲ್ಕ

(ಆ) **Readers charges ದರಗಳು:**

ಮೆಟ್ರಿಕ್–ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ **ಅಂಧ ವಿದ್ಯಾರ್ಥಿಗಳಿಗೆ ಮೇಲಿನ ದರಗಳಂತೆ ಶುಲ್ಕ ವಿನಾಯಿತಿ ನೀಡುವುದರ ಜೊತೆಗೆ** ಈ ಕೆಳಗಿನಂತೆ Readers charges ಅನ್ನು ಸಹ ಕರ್ನಾಟಕ ಸರ್ಕಾರದ ಅನುದಾನದಿಂದ ಪಾವತಿಸತಕ್ಕದ್ದು.

| **ಕೋರ್ಸಿನ ಗುಂಪು** | **Readers charges (10 ತಿಂಗಳಿಗೆ)** |
|---|---|
| ಗುಂಪು–ಎ, ಬಿ | ರೂ.1,750/– |
| ಗುಂಪು–ಸಿ | ರೂ.1,300/– |
| ಗುಂಪು–ಡಿ | ರೂ.900/– |

**IV. ಶುಲ್ಕ ವಿನಾಯಿತಿ ದರಗಳನ್ನು ನಿಗದಿಪಡಿಸುವ ಸಮಿತಿ:**

ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು/ವಿಶ್ವ ವಿದ್ಯಾನಿಲಯಗಳು ನಿಗದಿಪಡಿಸಿರುವ ಶುಲ್ಕಗಳ ದರಗಳ ಆಧಾರದ ಮೇಲೆ, ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿನ ಈ ಕೆಳಗಿನ ಸಮಿತಿಯು ಪ್ರತಿ ವರ್ಷ ಜೂನ್ ತಿಂಗಳಲ್ಲಿ, ವಿವಿಧ ಕೋರ್ಸುಗಳಿಗೆ ಶುಲ್ಕಗಳನ್ನು ನಿಗದಿಪಡಿಸತಕ್ಕದ್ದು.

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ | ಸದಸ್ಯರು |
| 4 | ಸರ್ಕಾರದ ಕಾರ್ಯದರ್ಶಿಗಳು (ವೆಚ್ಚ) ಆರ್ಥಿಕ ಇಲಾಖೆ | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ | ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇಲಾಖೆ | ಸದಸ್ಯರು |
| 8 | ಎಲ್ಲಾ ವಿಶ್ವವಿದ್ಯಾಲಯಗಳ ಕುಲಸಚಿವರು | ಸದಸ್ಯರು |
| 9 | ಆಯುಕ್ತರು / ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯ ಕಾರ್ಯದರ್ಶಿ |

**V. ಶುಲ್ಕ ವಿನಾಯಿತಿ ಮಂಜೂರಾತಿ ಪ್ರಾಧಿಕಾರ:**

ಅ) ಭಾರತ ಸರ್ಕಾರದ ಅನುದಾನದಲ್ಲಿ ಪಾವತಿಸುವ, ಗುಂಪು–ಎ ಕೋರ್ಸುಗಳಿಗೆ ಸಂಬಂಧಿಸಿದಂತೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತಾಲಯದ ಉಪ ನಿರ್ದೇಶಕರು, ಶುಲ್ಕ ವಿನಾಯಿತಿ ಮಂಜೂರು ಮಾಡುವ ಪ್ರಾಧಿಕಾರ ಆಗಿರುತ್ತಾರೆ.

ಆ) ರಾಜ್ಯ ಸರ್ಕಾರದ ಅನುದಾನದಿಂದ ಪಾವತಿಸುವ ಗುಂಪು–ಬಿ, ಗುಂಪು–ಸಿ, ಮತ್ತು ಗುಂಪು–ಡಿ ಕೋರ್ಸುಗಳಿಗೆ ಸಂಬಂಧಿಸಿದಂತೆ, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಯು, ಆಯಾ ಜಿಲ್ಲೆಯಲ್ಲಿ, ನಿಗದಿತ ಶುಲ್ಕ ವಿನಾಯಿತಿ ಮಂಜೂರು ಮಾಡುವ ಪ್ರಾಧಿಕಾರ ಆಗಿರುತ್ತಾರೆ.

**VI. ಅರ್ಜಿ ಸಲ್ಲಿಸುವ ವಿಧಾನ:**

1. (ಅ) ಈ ಯೋಜನೆಯಡಿ ಸೌಲಭ್ಯ ಪಡೆಯಲು ಇಚ್ಛಿಸುವ ಹಾಗೂ ಅರ್ಹತೆಯುಳ್ಳ ವಿದ್ಯಾರ್ಥಿಗಳು, ನಿಗದಿತ **ಅರ್ಜಿ ನಮೂನೆಯಲ್ಲಿ, ಆನ್‌ಲೈನ್** ಮೂಲಕ ಎಲ್ಲಾ ವಿವರಗಳನ್ನು ನಮೂದಿಸಿ, ಆಯುಕ್ತರು, ಆಯಾ ಕೋರ್ಸುಗಳಿಗೆ ಅಥವಾ ಕೋರ್ಸುಗಳ ಗುಂಪುಗಳಿಗೆ ನಿಗದಿಪಡಿಸುವ, ಅಂತಿಮ ದಿನಾಂಕದೊಳಗಾಗಿ ಅರ್ಜಿ ಸಲ್ಲಿಸಬೇಕು.

(ಆ) 2013–14ನೇ ಶೈಕ್ಷಣಿಕ ಸಾಲಿಗೆ, ಎಲ್ಲಾ ಕೋರ್ಸುಗಳಲ್ಲಿ ಹಾಗೂ ಎಲ್ಲಾ ವರ್ಷ/ಸೆಮಿಸ್ಟರ್‌ಗಳಲ್ಲಿ ವ್ಯಾಸಂಗ ಮಾಡುವ ಹಾಗೂ ಸೌಲಭ್ಯ ಪಡೆಯಲು ಇಚ್ಛಿಸುವ, ಎಲ್ಲಾ ಅರ್ಹ ವಿದ್ಯಾರ್ಥಿಗಳು ನಿಗದಿತ ನಮೂನೆಯಲ್ಲಿ, ಆನ್‌ಲೈನ್ ಮೂಲಕ ಕಡ್ಡಾಯವಾಗಿ ಅರ್ಜಿ ಸಲ್ಲಿಸಬೇಕು. ನಂತರದ ವರ್ಷಗಳಲ್ಲಿ ನವೀಕರಣ ವಿದ್ಯಾರ್ಥಿಗಳು, ಅವರಿಗಾಗಿ ನಿಗದಿಪಡಿಸಿದ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಬೇಕು.

(ಇ) ಯಾವುದಾದರೂ ಕೋರ್ ಬ್ಯಾಂಕಿಂಗ್ ವ್ಯವಸ್ಥೆ ಇರುವ ಬ್ಯಾಂಕಿನಲ್ಲಿ, ವಿದ್ಯಾರ್ಥಿಯ ಹೆಸರಿನಲ್ಲಿ, ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ ದಾಖಲಾಗಿರುವ ರೀತಿಯಲ್ಲಿ, ಉಳಿತಾಯ ಖಾತೆಯನ್ನು ತೆರೆದು, ವಿವರಗಳನ್ನು ಅರ್ಜಿಯಲ್ಲಿ ನಮೂದಿಸಬೇಕು.

(ಈ) ಅರ್ಜಿಯೊಂದಿಗೆ ಲಗತ್ತಿಸಬೇಕಾದ ಎಲ್ಲಾ ಮೂಲ ದಾಖಲೆಗಳನ್ನು ಸ್ಕ್ಯಾನ್ ಮಾಡಿ, ಅಪ್‌ಲೋಡ್ ಮಾಡಬೇಕು.

2. (ಅ) ವಿದ್ಯಾರ್ಥಿಗೆ ನೀಡುವ ಸೌಲಭ್ಯಗಳು, ಅವರ ಶೈಕ್ಷಣಿಕ ಪ್ರಗತಿ ಮತ್ತು ಉತ್ತಮ ನಡತೆಗೆ ಒಳಪಟ್ಟಿರುತ್ತದೆ. ಆದ ಕಾರಣ, ಶೈಕ್ಷಣಿಕ ಪ್ರಗತಿಯು ತೃಪ್ತಿಕರವಾಗಿಲ್ಲದಿದ್ದಲ್ಲಿ, ಅಧಿಕೃತವಾಗಿ ಅನುಮತಿಯನ್ನು ಪಡೆಯದೇ ಪದೇ ಪದೇ ತರಗತಿಗಳಿಗೆ ಗೈರು ಹಾಜರಾದಲ್ಲಿ, ಅಥವಾ ಮುಷ್ಕರಗಳಲ್ಲಿ ಭಾಗವಹಿಸಿದ್ದಲ್ಲಿ ಅಥವಾ ಇನ್ಯಾವುದೇ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗಿದ್ದಲ್ಲಿ, ಅಂತಹ ವಿದ್ಯಾರ್ಥಿಗಳು ಈ ಸೌಲಭ್ಯಕ್ಕೆ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸತಕ್ಕದ್ದು ಮತ್ತು ಮಂಜೂರಾತಿ ಆಗಿದ್ದಲ್ಲಿ, ಅದನ್ನು ರದ್ದುಪಡಿಸತಕ್ಕದ್ದು.

**VII. ಪ್ರವರ್ಗವಾರು ಮತ್ತು ಕೋರ್ಸಿನ ಗುಂಪುವಾರು ಅನುದಾನ ಹಂಚಿಕೆ ವಿಧಾನ:**

ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರ ಒದಗಿಸುವ ಅನುದಾನವನ್ನು ಈ ಕೆಳಗಿನಂತೆ ಹಂಚಿಕೆ ಮಾಡಬೇಕು.

**1. ಭಾರತ ಸರ್ಕಾರ ನೀಡುವ ಅನುದಾನ ಮತ್ತು ರಾಜ್ಯ ಸರ್ಕಾರದ Committed Liability ಭಾಗವನ್ನು ಹಂಚಿಕೆ ಮಾಡುವ ವಿಧಾನ:**

(i) ಗುಂಪು–ಎ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಹಾಗೂ ಕುಟುಂಬದ ವಾರ್ಷಿಕ ವರಮಾನ ರೂ.1.00 ಲಕ್ಷ ಮಿತಿಯೊಳಗಿರುವ, ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ, 3ಬಿ ಮತ್ತು ಭಾರತ ಸರ್ಕಾರ ಅಧಿಸೂಚಿಸಿರುವ ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿದ ವಿದ್ಯಾರ್ಥಿಗಳಿಗೆ ಮಾತ್ರ ಉಪಯೋಗಿಸಬೇಕು.

(ii) ಲಭ್ಯವಿರುವ ಅನುದಾನದ ಪೈಕಿ, ನಿಗದಿತ ಮೆರಿಟ್ ಮತ್ತು ಕುಟುಂಬದ ವಾರ್ಷಿಕ ವರಮಾನ ರೂ.1.00 ಲಕ್ಷ ಮಿತಿಯೊಳಗಿರುವ, ಪ್ರವರ್ಗ–1ರ ಎಲ್ಲಾ ಗುಂಪು–ಎ ಕೋರ್ಸಿನ ವಿದ್ಯಾರ್ಥಿಗಳಿಗೆ, **ಮೊದಲನೆಯ ಆದ್ಯತೆ**ಯ ಮೇಲೆ ಸಮಿತಿಯು ನಿರ್ಧರಿಸಿದ ದರಗಳಂತೆ ಶುಲ್ಕ ವಿನಾಯಿತಿ ನೀಡಬೇಕು.

(iii)ಎಲ್ಲಾ ಅರ್ಹ ಅಂಧ ವಿದ್ಯಾರ್ಥಿಗಳಿಗೆ, Readers charges ಅನ್ನು ಹಾಗೂ ಸಮಿತಿಯು ನಿರ್ಧರಿಸಿದ ದರಗಳಂತೆ ಶುಲ್ಕಗಳನ್ನು **ದ್ವಿತೀಯ ಆದ್ಯತೆ** ಮೇಲೆ ಮಂಜೂರು ಮಾಡಬೇಕು.

(IV) ಉಳಿದ ಮೊತ್ತವನ್ನು ಪ್ರವರ್ಗವಾರು ಈ ಕೆಳಗಿನ ಶೇಕಡವಾರು ಪ್ರಕಾರ ಹಂಚಿಕೆ ಮಾಡಬೇಕು.

ಪ್ರವರ್ಗ–2ಎ – 62%
ಪ್ರವರ್ಗ–3ಎ – 17%
ಪ್ರವರ್ಗ–3ಬಿ – 21%
**ಒಟ್ಟು – 100%**

(V) ಒಂದು ವೇಳೆ, ಭಾರತ ಸರ್ಕಾರ ನೀಡುವ ಅನುದಾನ ಮತ್ತು ರಾಜ್ಯ ಸರ್ಕಾರದ Committed Liability ಯ ಒಟ್ಟು ಮೊತ್ತ ಎಲ್ಲಾ ಗುಂಪು–ಎ ಕೋರ್ಸುಗಳ ವಿದ್ಯಾರ್ಥಿಗಳಿಗೆ ಮಂಜೂರಾತಿಯಾಗಿ ಉಳಿದಲ್ಲಿ, ಅದನ್ನು ರಾಜ್ಯ ಸರ್ಕಾರ ನಿರ್ಧರಿಸುವ ಗುಂಪು–ಬಿ ರಲ್ಲಿನ ಇತರೆ ಕೋರ್ಸುಗಳಿಗೆ ಹಂಚಿಕೆ ಮಾಡಬೇಕು.

1. **ಕರ್ನಾಟಕ ಸರ್ಕಾರ ನೀಡುವ ಅನುದಾನದ ಹಂಚಿಕೆ**

(ಅ) ಗುಂಪು–ಎ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಹಾಗೂ ರೂ.1.00 ಲಕ್ಷಕ್ಕೆ ಮೇಲ್ಪಟ್ಟು ಹಾಗೂ ರೂ.2.50 ಲಕ್ಷಕ್ಕಿಂತ ಕಡಿಮೆ ಕುಟುಂಬದ ವಾರ್ಷಿಕ ವರಮಾನ ಹೊಂದಿರುವ ಹಿಂದುಳಿದ ವರ್ಗಗಳ ಪ್ರವರ್ಗ–1ರ ವಿದ್ಯಾರ್ಥಿಗಳಿಗೆ ಹಾಗೂ ಕುಟುಂಬದ ವಾರ್ಷಿಕ ವರಮಾನ ರೂ.1.00 ಲಕ್ಷದ ಮಿತಿಯೊಳಗೆ ಇರುವ ಗುಂಪು–ಬಿ, ಗುಂಪು–ಸಿ ಮತ್ತು ಗುಂಪು–ಡಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ ಮತ್ತು 3ಬಿ ಗೆ ಸೇರಿದ ವಿದ್ಯಾರ್ಥಿಗಳಿಗೆ ಮತ್ತು ಎಲ್ಲಾ ಗುಂಪುಗಳ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಇತರೆ ಜಾತಿ/ಧರ್ಮದ ವಿದ್ಯಾರ್ಥಿಗಳಿಗೆ, (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ಹೊರತುಪಡಿಸಿ) ಉಪಯೋಗಿಸಬೇಕು.

**(ಆ) ಕರ್ನಾಟಕ ಸರ್ಕಾರ ನೀಡುವ ಅನುದಾನದ ಹಂಚಿಕೆಯ ಆದ್ಯತೆಗಳು**

| | |
|---|---|
| (i) | ನಿಗದಿತ ಮೆರಿಟ್ ಮತ್ತು ರೂ.1.00 ಲಕ್ಷಕ್ಕೆ ಮೇಲ್ಪಟ್ಟು ಹಾಗೂ ರೂ.2.50 ಲಕ್ಷಕ್ಕಿಂತ ಕಡಿಮೆ ಕುಟುಂಬದ ವಾರ್ಷಿಕ ವರಮಾನ ಹೊಂದಿರುವ, ಗುಂಪು–ಎ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ, **ಎಲ್ಲಾ ಪ್ರವರ್ಗ–1ರ** ವಿದ್ಯಾರ್ಥಿಗಳಿಗೆ, ಹಾಗೂ ರೂ.2.50 ಲಕ್ಷ ಕುಟುಂಬದ ವಾರ್ಷಿಕ ಆದಾಯ ಮಿತಿಯಿರುವ, ಗುಂಪು–ಬಿ, ಗುಂಪು–ಸಿ ಮತ್ತು ಗುಂಪು–ಡಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಪ್ರವರ್ಗ–1ರ ಎಲ್ಲಾ ವಿದ್ಯಾರ್ಥಿಗಳಿಗೆ, **ಮೊದಲನೆಯ ಆದ್ಯತೆ**ಯ ಮೇಲೆ ಶುಲ್ಕ ವಿನಾಯಿತಿ ನೀಡಬೇಕು. |
| (ii) | ನಿಗದಿತ ಮೆರಿಟ್ ಮತ್ತು ರೂ.1.00 ಲಕ್ಷ ಆದಾಯ ಮಿತಿಯೊಳಗಿರುವ ಹಾಗೂ ಗುಂಪು–ಬಿ, ಗುಂಪು–ಸಿ, ಮತ್ತು ಗುಂಪು–ಡಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಎಲ್ಲಾ ಅರ್ಹ ಅಂಧ ವಿದ್ಯಾರ್ಥಿಗಳಿಗೆ, Readers charges ಅನ್ನು ಹಾಗೂ ರಾಜ್ಯ ಸಮಿತಿಯು ನಿರ್ಧರಿಸಿದ ದರಗಳಂತೆ ಶುಲ್ಕಗಳನ್ನು **ದ್ವಿತೀಯ ಆದ್ಯತೆ** ಮೇಲೆ ಮಂಜೂರು ಮಾಡಬೇಕು. |
| (iii) | ಮೇಲಿನ (i) ಮತ್ತು (ii) ಕ್ಕೆ ಬೇಕಾಗುವ ಮೊತ್ತವನ್ನು ಹೊರತುಪಡಿಸಿ, ಉಳಿದ ಮೊತ್ತವನ್ನು ಗುಂಪು–ಬಿ, ಗುಂಪು–ಸಿ, ಮತ್ತು ಗುಂಪು–ಡಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ಪ್ರವರ್ಗ–2ಎ, 3ಎ, 3ಬಿ ಮತ್ತು ಇತರೆ ಸಮುದಾಯಗಳ ವಿದ್ಯಾರ್ಥಿಗಳಿಗೆ ಈ ಕೆಳಗಿನ ಪ್ರಕಾರ ಶೇಕಡಾವಾರು ಹಂಚಿಕೆ ಮಾಡಬೇಕು.<br>ಪ್ರವರ್ಗ–2ಎ – 58%<br>ಪ್ರವರ್ಗ–3ಎ – 16%<br>ಪ್ರವರ್ಗ–3ಬಿ – 20%<br>ಇತರೆ ಸಮುದಾಯಗಳು – 06%<br>**ಒಟ್ಟು – 100%** |

| | |
|---|---|
| (iv) | ಈ ಮೇಲಿನಂತೆ ಪ್ರವರ್ಗವಾರು ಹಂಚಿಕೆ ಮಾಡಿದ ನಂತರ, ಪ್ರತಿ ಪ್ರವರ್ಗವಾರು ಹಂಚಿಕೆ ಮಾಡಲಾದ ಮೊತ್ತವನ್ನು ಕೋರ್ಸಿನ ಗುಂಪುವಾರು ಸ್ವೀಕರಿಸಲಾಗುವ ಅರ್ಜಿಗಳ ಸಂಖ್ಯೆಗೆ ಅನುಗುಣವಾಗಿ Weighted Average ಪ್ರಕಾರ ಹಂಚಿಕೆ ಮಾಡಬೇಕು. |

(ಇ) ಆ ಆರ್ಥಿಕ ವರ್ಷಕ್ಕೆ ಲಭ್ಯವಾಗುವ ಅನುದಾನದ ಮಿತಿಗೆ ಒಳಪಟ್ಟು, ಅರ್ಹತೆ ಮತ್ತು ಆದಾಯಕ್ಕೆ (Merit cum Means) ಅನುಗುಣವಾಗಿ ಮಂಜೂರು ಮಾಡಬೇಕು.

**VIII. ಕಾಲೇಜು ಪ್ರಾಂಶುಪಾಲರು ಮತ್ತು ಇಲಾಖೆಯ "ಪರಿಶೀಲನಾ ಅಧಿಕಾರಿ" ಕೈಗೊಳ್ಳಬೇಕಾದ ಕ್ರಮಗಳು:**

(ಅ) ಆ ಕಾಲೇಜಿನ ವಿದ್ಯಾರ್ಥಿಗಳು ಆನ್‌ಲೈನ್ ಮೂಲಕ ಸಲ್ಲಿಸುವ ಅರ್ಜಿಗಳ ಸ್ವೀಕೃತಿ ಪತ್ರ ಮತ್ತು ಅಪ್‌ಲೋಡ್ ಮಾಡಿರುವ ಎಲ್ಲಾ ದಾಖಲೆಗಳ, ಧೃಢೀಕೃತ ಪ್ರತಿಗಳನ್ನು ವಿದ್ಯಾರ್ಥಿಗಳಿಂದ ಪಡೆದುಕೊಳ್ಳಬೇಕು. ಸದರಿ ಮಾಹಿತಿಯನ್ನು ಅವರು ಸಲ್ಲಿಸಿರುವ ದಾಖಲೆಗಳನ್ನು, ಕಾಲೇಜಿನಲ್ಲಿ ಲಭ್ಯವಿರುವ ಮಾಹಿತಿಗಳೊಂದಿಗೆ ಪರಿಶೀಲಿಸಿ ಆನ್‌ಲೈನ್‌ನಲ್ಲಿ ಧೃಢೀಕರಿಸಬೇಕು. ಈ ರೀತಿ ಧೃಢೀಕರಿಸಲ್ಪಟ್ಟ ಪಟ್ಟಿಯ ಹಾರ್ಡ್‌ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು, **ಕೋರ್ಸುವಾರು, ಪ್ರವರ್ಗವಾರು, ಪ್ರತಿ ವಿದ್ಯಾರ್ಥಿವಾರು** ಅಗತ್ಯ ದಾಖಲಾತಿಗಳನ್ನು, ಅನುಕ್ರಮವಾಗಿ ಜೋಡಿಸಿ ಸಿದ್ದಪಡಿಸಿಟ್ಟುಕೊಳ್ಳಬೇಕು.

(ಆ) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ, ಅಧಿಕೃತ **"ಪರಿಶೀಲನಾ ಅಧಿಕಾರಿ"** ಕಾಲೇಜಿನ ಪ್ರಾಂಶುಪಾಲರು ಈ ಮೇಲಿನಂತೆ ಸಿದ್ದಪಡಿಸಿದ ಧೃಢೀಕೃತ ಪಟ್ಟಿಯಲ್ಲಿ ನಮೂದಾಗಿರುವ ಎಲ್ಲ ವಿದ್ಯಾರ್ಥಿಗಳ ದಾಖಲಾತಿಗಳು ಸರಿ ಇರುವ ಬಗ್ಗೆ ಹಾಗೂ ಈ ಸೌಲಭ್ಯಕ್ಕೆ ಅವರು ಅರ್ಹರಿರುವ ಬಗ್ಗೆ **ಆನ್‌ಲೈನ್‌ನಲ್ಲಿ** ಧೃಢೀಕರಿಸಬೇಕು. ಸದರಿ ದಾಖಲಾತಿಗಳನ್ನು ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು.

(ಇ) ಈ ರೀತಿ ಸಲ್ಲಿಸಿದ ಮಾಹಿತಿಯನ್ನು ತಾಲ್ಲೂಕು ಮಟ್ಟದ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಪರಿಶೀಲನೆ ಮಾಡಿ, ಆಯಾ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳಿಗೆ ಸಲ್ಲಿಸಬೇಕು.

**IX. ಶುಲ್ಕ ವಿನಾಯಿತಿ ಮಂಜೂರು ಮಾಡುವಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:**

ಈ ಮೇಲಿನಂತೆ ಸಲ್ಲಿಸಿದ ಮಾಹಿತಿಯನ್ನು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ, ಪರಿಶೀಲನೆ ಮಾಡಿ,

| | | |
|---|---|---|
| ಅ) | (i) | ಗುಂಪು–ಎ ಕೋರ್ಸುಗಳಿಗೆ ಸಂಬಂಧಿಸಿದಂತೆ, ಕಾಲೇಜುವಾರು, ಕೋರ್ಸುವಾರು ಮತ್ತು ಪ್ರವರ್ಗವಾರು, ವಿದ್ಯಾರ್ಥಿಗಳ digitized list ಅನ್ನು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತಾಲಯದ ನಿಗದಿತ ಉಪ ನಿರ್ದೇಶಕರಿಗೆ ಕಳುಹಿಸಬೇಕು. ಇದನ್ನು ಪರಿಶೀಲಿಸಿ, ಈ ವಿದ್ಯಾರ್ಥಿಗಳಿಗೆ, ಸದರಿ ಉಪ ನಿರ್ದೇಶಕರು ಶುಲ್ಕ ವಿನಾಯಿತಿ ಹಾಗೂ ಅಂಥ ವಿದ್ಯಾರ್ಥಿಗಳಿಗೆ, ಶುಲ್ಕ ವಿನಾಯಿತಿ & Readers charges ಅನ್ನು ಮಂಜೂರು ಮಾಡಬೇಕು. |
| | (ii) | ಈ ಮೇಲಿನಂತೆ ಮಂಜೂರಾತಿ ನೀಡಲಾದ ಪಟ್ಟಿಯನ್ನು ಆಯುಕ್ತಾಲಯದ ನಿಗದಿತ ಅಪರ/ಜಂಟಿ ನಿರ್ದೇಶಕರು ಪರಿಶೀಲಿಸಿ, ಮೇಲುಸಹಿ ಮಾಡಬೇಕು ಹಾಗೂ ಅವರ ಡಿಜಿಟಲ್ ಸಹಿಯೊಂದಿಗೆ ಭಾರತ ಸರ್ಕಾರಕ್ಕೆ ಆನ್‌ಲೈನ್ ಮೂಲಕ ಕಳುಹಿಸಬೇಕು. |
| ಆ) | (i) | ರಾಜ್ಯ ಸರ್ಕಾರದ ಅನುದಾನದಿಂದ ಪಾವತಿಸುವ ಗುಂಪು–ಎ (ಪ್ರವರ್ಗ–1) ಗುಂಪು–ಬಿ, ಗುಂಪು–ಸಿ ಮತ್ತು ಗುಂಪು–ಡಿ ಕೋರ್ಸುಗಳಿಗೆ ಸಂಬಂಧಿಸಿದಂತೆ, (ಪ್ರವರ್ಗ–1, 2ಎ, 3ಎ, ಮತ್ತು 3ಬಿ) ಅರ್ಹ ವಿದ್ಯಾರ್ಥಿಗಳಿಗೆ, ಸಮಿತಿ ಕೋರ್ಸುವಾರು ನಿಗದಿಪಡಿಸಿರುವ ದರಗಳಂತೆ **"ಶುಲ್ಕ ವಿನಾಯಿತಿ"** ಮತ್ತು ಅಂಥ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ & Readers charges ಅನ್ನು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ **ಮಂಜೂರು ಮಾಡಬೇಕು.** |
| | (ii) | ಮಂಜೂರಾತಿ ಆದೇಶ ಮತ್ತು ಬ್ಯಾಂಕುವಾರು ಬಿಲ್ಲುಗಳನ್ನು ಇಲಾಖೆಯ ವೆಬ್‌ಪೋರ್ಟಲ್‌ನಿಂದ ಡೌನ್‌ಲೋಡ್ ಮಾಡಿಕೊಂಡು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಇವರ ಮೇಲುರುಜು ಪಡೆಯಬೇಕು. |
| | (iii) | ಸದರಿ ಬಿಲ್ಲನ್ನು, ಬ್ಯಾಂಕುವಾರು ವಿದ್ಯಾರ್ಥಿಗಳ, ಬ್ಯಾಂಕ್ ಅಕೌಂಟ್ ಮತ್ತು ಐ.ಎಫ್.ಎಸ್.ಸಿ ಕೋಡ್ ನೊಂದಿಗೆ ಖಜಾನೆಗೆ (ಸಾಫ್ಟ್ ಪ್ರತಿಯೊಂದಿಗೆ) ಸಲ್ಲಿಸಿ, ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ **ಆನ್‌ಲೈನ್ ಮೂಲಕ** ಜಮಾ ಮಾಡಬೇಕು. |
| (ಇ) | | ಈ ಯೋಜನೆಯಡಿ ಮಂಜೂರಾದ ಶುಲ್ಕಗಳನ್ನು ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಆ ಆರ್ಥಿಕ ವರ್ಷದ ಒಳಗಾಗಿ **ಒಂದೇ ಕಂತಿನಲ್ಲಿ** ಜಮಾ ಮಾಡಬೇಕು. |

**X. ತಪ್ಪು ಮಾಹಿತಿಗೆ ದಂಡ:**

1. ಅರ್ಜಿದಾರರು ಅಥವಾ ಶಿಕ್ಷಣ ಸಂಸ್ಥೆಯು, ತಪ್ಪು ಮಾಹಿತಿ ನೀಡಿದ್ದಲ್ಲಿ, ಅಂತಹವರ ವಿರುದ್ದ ನಿಯಮಾನುಸಾರ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲಾಗುವುದು.
2. ಭಾರತೀಯ ದಂಡ ಸಂಹಿತೆಯ ಕಲಂ 177 ಮತ್ತು 181ರ ಪ್ರಕಾರ, ಶಿಕ್ಷೆಗೆ ಗುರಿಪಡಿಸಲಾಗುತ್ತದೆ.
3. ಕಾನೂನಿನಂತೆ ಕ್ರಮ ಜರುಗಿಸುವುದರ ಜೊತೆಗೆ, ವಿದ್ಯಾರ್ಥಿಯು ಪಡೆದ ಒಟ್ಟು ಆರ್ಥಿಕ ಸಹಾಯವನ್ನು ಆ ವಿದ್ಯಾರ್ಥಿಯಿಂದ ಅಥವಾ ಅವರ ತಂದೆ–ತಾಯಿ / ಪೋಷಕರಿಂದ, ಭೂ ಕಂದಾಯ ಬಾಕಿಯೆಂದು ವಸೂಲಿ ಮಾಡಲಾಗುವುದು.
4. ಮಂಜೂರು ಮಾಡುವ ಅಧಿಕಾರಿಗಳು ಸಹ, ನಿಯಮಗಳ ವಿರುದ್ದ ಮಂಜೂರು ಮಾಡಿ, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದಲ್ಲಿ, ಅಂತಹವರ ವಿರುದ್ದ ಶಿಸ್ತಿನ ಕ್ರಮ ಜರುಗಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು ಹಾಗೂ ಈ ರೀತಿ ತಪ್ಪಾಗಿ ಪಾವತಿಯಾದ ಮೊತ್ತವನ್ನು ಅವರ ವೇತನದಿಂದ ವಸೂಲಿ ಮಾಡಲಾಗುವುದು.

**XI. ಇತರೆ:**

1. ಪ್ರವರ್ಗವಾರು ಜಾತಿಗಳ ಪಟ್ಟಿ, ಕುಟುಂಬದ ವಾರ್ಷಿಕ ವರಮಾನ, ಅರ್ಹತೆ, ಇತ್ಯಾದಿ, ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.

2. ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಅರ್ಜಿ ನಮೂನೆ, ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಇತ್ಯಾದಿಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತರು ನಿರ್ಧರಿಸುವುದು.

**ಬಿ.ಹೆಚ್.ಅನಿಲ್‌ಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**(ಸರ್ಕಾರದ ಆದೇಶ ಸಂ.ಹಿಂವಕ 589 ಬಿಎಂಎಸ್ 2013, ಬೆಂಗಳೂರು, ದಿನಾಂಕ 05.10.2013 ಕ್ಕೆ**

**ಅನುಬಂಧ–2**

**ಗುಂಪುವಾರು ಕೋರ್ಸುಗಳ ವಿವರಗಳು**

| | |
|---|---|
| Group- 'A' | (i) Degree and Post Graduate level courses including M.Phil., P.hD., and Post Doctoral research in Medicine (Allopathic, Indian and other recognized systems of medicines), Engineering, Technology, Planning, Architecture, Design, Fashion Technology, Agriculture, Veterinary & Allied Sciences, Management, Business Finance / Administration, Computer Science/Applications. |
| | (ii) Commercial Pilot License (including helicopter pilot and multiengine rating) course. |
| | (iii) Post Graduate Diploma courses in various branches of management & medicine. |
| | (iv) C.A/I.C.W.A/C.S./I.C.F.A etc., |
| | (v) M.Phil., Ph.D. and Post Doctoral Programmes<br>(D.Litt., D.Sc., etc.) |
| | (vi) L.L.M. |
| Group- 'B' | (i) Graduate/Post graduate courses leading to Degree, Diploma, Certificate in areas like Pharmacy (B. Pharma.,), Nursing (B Nursing), LLB, BFS, other paramedical branches like rehabilitation, diagnostics etc., Mass Communication, Hotel Management & Catering, Travel/Tourism/Hospitality Management, Interior Decoration, Nutrition & Dietetics, Commercial Art, Financial Services (e.g. Banking, Insurance, Taxation etc.) for which entrance qualification is minimum Sr. Secondary (10+2). |
| | (ii) Post Graduate courses not covered under Group A e.g. MA/M.Sc., /M.com/M.Ed.,/M. Pharma., etc. |
| Group- 'C' | All other courses leading to a graduate degree not covered under Group A & B e.g. BA/B.Sc.,/B.Com etc., |
| Group- 'D' | All post-matriculation level non-degree courses for which entrance qualification is High School (Class X), e.g. Senior Secondary Certificate (class XI and XII); both general and vocational stream, ITI courses, 3 year diploma courses in Polytechnics, etc., |

**ಬಿ.ಹೆಚ್.ಅನಿಲ್‌ಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR.110**

**SC.1000**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ ಅಡಿ 2013–14ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಯೋಇ 36 ಯೋವಿವಿ 2013, ದಿನಾಂಕ:02.08.2013

2. ಸರ್ಕಾರಿ ಆದೇಶ ಸಂಖ್ಯೆ:ಯೋಇ 36 ಯೋವಿವಿ 2013, ದಿನಾಂಕ:19.09.2013

3. ಸರ್ಕಾರಿ ಆದೇಶ ಸಂಖ್ಯೆ:ಯೋಇ 36 ಯೋವಿವಿ 2013, ದಿನಾಂಕ:28.10.2013

**ಪ್ರಸ್ತಾವನೆ:**

2013–14ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ ಅಡಿ ಒಟ್ಟು ರೂ.30150.00 ಲಕ್ಷಗಳನ್ನು ಒದಗಿಸಲಾಗಿದೆ. ಮೇಲೆ ಓದಲಾದ (1), (2) ಮತ್ತು (3)ರ ಸರ್ಕಾರಿ ಆದೇಶಗಳಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2013–14ನೇ ಸಾಲಿಗೆ ತಲಾ ರೂ.96.40 ಲಕ್ಷಗಳಂತೆ ಒಟ್ಟು ರೂ.28580.56 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

2013–14ನೇ ಸಾಲಿನ ಮುಂದಿನ ಕಂತಿನ ಅನುದಾನವಾಗಿ ತಲಾ ರೂ.50.00 ಲಕ್ಷಗಳಂತೆ ರೂ.14850.00 ಲಕ್ಷಗಳನ್ನು ಬಿಡುಗಡೆಗೊಳಿಸಲು ಸರ್ಕಾರವು ಉದ್ದೇಶಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 36 ಯೋವಿವಿ 2013, ಬೆಂಗಳೂರು, ದಿನಾಂಕ:09.01.2014**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2013–14ನೇ ಸಾಲಿನ ಮುಂದಿನ ಕಂತಿನ ಅನುದಾನವಾಗಿ ಅನುಬಂಧ–1 ರಲ್ಲಿ ಸೂಚಿಸಿರುವ ವಿಧಾನಸಭಾ ಕ್ಷೇತ್ರಗಳಿಗೆ ಮತ್ತು ಅನುಬಂಧ–2 ರಲ್ಲಿ ಸೂಚಿಸಿರುವ ವಿಧಾನ ಪರಿಷತ್ ಸದಸ್ಯರುಗಳ ಕ್ಷೇತ್ರಗಳಿಗೆ ತಲಾ ರೂ.50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳಂತೆ ಒಟ್ಟು ರೂ. 14850.00 ಲಕ್ಷ (ಒಂದು ನೂರ ನಲವತ್ತೆಂಟು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿ ಆದೇಶಿಸಿದೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ಲೆಕ್ಕಶೀರ್ಷಿಕೆ (ಯೋಜನೆ) | ಈವರೆಗೆ ಬಿಡುಗಡೆಗೊಳಿಸಿದ ಅನುದಾನ | ಪ್ರಸ್ತುತ ಬಿಡುಗಡೆ ಗೊಳಿಸುತ್ತಿರುವ ಅನುದಾನ | ಒಟ್ಟು ಬಿಡುಗಡೆಗೊಳಿಸಿದ ಅನುದಾನ |
|---|---|---|---|---|
| 1 | 2575–60–265–0–02–059 (ಇತರೆ ವೆಚ್ಚ) | 127.49 | –– | 127.49 |
| 2 | 4575–60–800–0–01–132 (ಬಂಡವಾಳ ವೆಚ್ಚ) | 16401.16 | **8577.36** | 24978.52 |
| 3 | 4575–60–800–0–01–422 (ವಿಶೇಷ ಘಟಕ ಯೋಜನೆ) | 8826.23 | **4588.65** | 13414.85 |
| 4 | 4575–60–800–0–01–423 (ಗಿರಿಜನ ಉಪಯೋಜನೆ) | 3225.68 | **1683.99** | 4909.67 |
| ಒಟ್ಟು | | 28580.56 | **14850.00** | 43430.56 |

ಬಿಡುಗಡೆಯಾದ ಈ ಅನುದಾನವನ್ನು ಜಿಲ್ಲಾಧಿಕಾರಿಗಳ ವೈಯಕ್ತಿಕ ಠೇವಣಿ ಖಾತೆಯಲಿಟ್ಟುಕೊಂಡು ಅಗತ್ಯತೆಗೆ ಅನುಗುಣವಾಗಿ ಖರ್ಚು ಮಾಡತಕ್ಕದ್ದು.

ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು ಅಧಿಕೃತ ಜ್ಞಾಪನ ಸಂಖ್ಯೆ:ಯೋಇ 39 ಯೋವಿವಿ 2012 (ಭಾ), ದಿನಾಂಕ:10.07.2012ರನ್ವಯ ಮತ್ತು ತದನಂತರ ಹೊರಡಿಸಿದ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸತಕ್ಕದ್ದು.

ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ಮುನ್ನ ಪರಿಷ್ಕೃತ ಮಾರ್ಗಸೂಚಿಯ ಕಂಡಿಕೆ 3.15 ರನ್ವಯ ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

ನಿಯಮಾನುಸಾರ ಹಣ ಬಳಕೆ ಪ್ರಮಾಣ ಪತ್ರವನ್ನು ಆಯಾ ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು. ಬಿಡುಗಡೆ ಮಾಡಿದ ಅನುದಾನವನ್ನು ನಿಗದಿತ ಅವಧಿಯಲ್ಲಿ ಬಳಕೆ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ 01 ಪಿಎಫ್‌ಪಿ 2013, ದಿನಾಂಕ:16.11.2013 ರಲ್ಲಿ ಆಡಳಿತ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ–1&2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಯೋಇ 36 ಯೋವಿವಿ 2013 ದಿನಾಂಕ:09.01.2014ರ ಅನುಬಂಧ–1**

**(ರೂ.ಲಕ್ಷಗಳಲ್ಲಿ)**

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರಗಳು | ಲೆಕ್ಕಶೀರ್ಷಿಕೆ 4575–60–800–0–01 | | | ಒಟ್ಟು |
|---|---|---|---|---|---|
| | | 132 | 422 | 423 | |
| **1)** | **ಬೀದರ್ ಜಿಲ್ಲೆ ವಿಧಾನಸಭಾ ಕ್ಷೇತ್ರಗಳು** | | | | |
| 1 | ಬೀದರ್ ದಕ್ಷಿಣ | 28.88 | 15.45 | 5.67 | 50.00 |
| 2 | ಬೀದರ್ ಉತ್ತರ | 28.88 | 15.45 | 5.67 | 50.00 |
| 3 | ಹುಮ್ನಾಬಾದ್ | 28.88 | 15.45 | 5.67 | 50.00 |
| 4 | ಬಸವಕಲ್ಯಾಣ | 28.88 | 15.45 | 5.67 | 50.00 |
| 5 | ಭಾಲ್ಕಿ | 28.88 | 15.45 | 5.67 | 50.00 |
| 6 | ಔರಾದ್ | 28.88 | 15.45 | 5.67 | 50.00 |
| **ಒಟ್ಟು** | | **173.28** | **92.70** | **34.02** | **300.00** |
| 2) | **ಬಳ್ಳಾರಿ ಜಿಲ್ಲೆ ವಿಧಾನ ಸಭಾ ಕ್ಷೇತ್ರಗಳು** | | | | |
| 1 | ಸಿರಗುಪ್ಪ | 28.88 | 15.45 | 5.67 | 50.00 |
| 2 | ಬಳ್ಳಾರಿ ನಗರ | 28.88 | 15.45 | 5.67 | 50.00 |

**ಪ್ರಸ್ತಾವನೆ:**

ಶ್ರೀ ಆರ್. ಸಕ್ರೀಯ್ಯನಾಯ್ಕ್, ನಿವೃತ್ತ ಹೆಚ್‌ಸಿ-171, ಚಿಕ್ಕಮಗಳೂರು ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಲಕ್ಕವಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ

**ದೋಷಾರೋಪಣೆ:-**

"ಶ್ರೀ ಆರ್. ಸಕ್ರೀಯ್ಯನಾಯ್ಕ್, ನಿವೃತ್ತ ಹೆಚ್‌ಸಿ 171, ಲಕ್ಕವಳ್ಳಿ ಠಾಣೆ, ಹಾಲಿ ಮೂಡಿಗೆರೆ ಪೊಲೀಸ್ ಠಾಣೆ. ನೀವುಗಳು ಬಡಗಿ ನಾಗೇಶ ಎಂಬುವರ ಹತ್ತಿರ ಅನಧಿಕೃತವಾಗಿ ಮಂಚ ಮಾಡಿಸಲು ಹೇಳಿ ಅದನ್ನು ಫಾರೆಸ್ಟ್ ಸಿಬ್ಬಂದಿಯವರು ರೈಡ್ ಮಾಡಿಕೊಂಡು ಹೋಗಿದ್ದರಿಂದ ಇದನ್ನು ತಿಳಿದ ಮೇಲೆ ಫಾರೆಸ್ಟರ್ ಶ್ರೀ ಸಿ.ಟಿ. ಗಂಗಯ್ಯ, ಲಕ್ಕವಳ್ಳಿ ಇವರು ನೀಡಲು ಹೋದ ದೂರಿನ ಬಗ್ಗೆ ಯಾವುದೇ ವಿಚಾರ ವಿನಿಮಯ ಮಾಡದೇ ಫಾರೆಸ್ಟ ಇಲಾಖೆಯ ಸಿಬ್ಬಂದಿಯವರ ಹತ್ತಿರ ದುರ್ನಡತೆಯಿಂದ ನಡೆದು ಕೊಂಡಿರುವುದಲ್ಲದೆ ಆ ಇಲಾಖೆಯವರು ಯಾರಾದರೂ ಸಿಕ್ಕರೆ ಅವರನ್ನು ನಿಂದಿಸಿ ಬೈದು ಬೆದರಿಕೆ ಹಾಕಿರುವ ಬಗ್ಗೆ"

ಮೇಲ್ಕಂಡ ಆರೋಪದ ಮೇಲೆ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ದದ ಆರೋಪವು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 25.03.1997ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 29.05.2000ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಆ.ಪೊ.ಅ.ರವರು ನಿವೃತ್ತರಾಗಿರುವುದರಿಂದ ಮತ್ತು ಇವರಿಂದ ಸರ್ಕಾರದ ಬೊಕ್ಕಸಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗದೇ ಇರುವ ಹಿನ್ನಲೆಯಲ್ಲಿ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಪರಿಷ್ಕೃತ ದಂಡನೆಯನ್ನು ವಿಧಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 42 ಪೊಸಿಅ 2013 ಬೆಂಗಳೂರು, ದಿನಾಂಕ: 13.01.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಸಕ್ರೀಯ್ಯನಾಯ್ಕ್, ನಿವೃತ್ತ ಹೆಚ್‌ಸಿ-171, ಚಿಕ್ಕಮಗಳೂರು ಜಿಲ್ಲೆ, ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಒಂದು ವರ್ಷದ ಅವಧಿಯವರೆಗೆ ತಡೆ ಹಿಡಿಯುವ ದಂಡನೆಯನ್ನಾಗಿ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.166

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್. ಬಸವನಗೌಡ, ಪಿಸಿ-539, 7ನೇ ಪಡೆ, ಕೆಎಸ್‌ಆರ್‌ಪಿ, ಮಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಕ.ರಾ.ಮೀ.ಪೊ., ಮಂಗಳೂರು ಇವರ ಆದೇಶ ಸಂಖ್ಯೆ: 43/ಇವಿ7/2012-13 (ಕ.ಆ.ಸಂ. 35/2012-13) ದಿನಾಂಕ 02.07.2012

2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/18/2012-13 ದಿನಾಂಕ 19.02.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15.05.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)9/2013-14 ದಿನಾಂಕ 20.09.2013

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 183 ಸಿಎನ್‌ಎಸ್ 2013 ದಿನಾಂಕ: 02.01.2014

**ಪ್ರಸ್ತಾವನೆ:**

ಶ್ರೀ ಆರ್. ಬಸವನಗೌಡ, ಪಿಸಿ–539, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು 7ನೇ ಪಡೆ, ಕೆಎಸ್‌ಆರ್‌ಪಿ, ಮಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪಹರೆ ಕರ್ತವ್ಯದಲ್ಲಿ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಬಸವನ ಗೌಡ ಆರ್, ಪಿಸಿ ಸಂಖ್ಯೆ 539, 'ಎಫ್' ದಳ, 7ನೇ ಪಡೆ, ಕರಾಮೀಪೊ, ಮಂಗಳೂರು ಆದ ನೀವು ದಿನಾಂಕ 02.06.2012ರಂದು ಪಹರೆ ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ದೋಷಾರೋಪಣೆಗೆ ಸಮಜಾಯಿಷಿ ನೀಡಲು ಆ.ಪೊ.ಅ.ರವರಿಗೆ ಸಾಕಷ್ಟು ಕಾಲಾವಕಾಶ ನೀಡಿದ ನಂತರವೂ ಲಿಖಿತ ಸಮಜಾಯಿಷಿಯನ್ನು ಸಲ್ಲಿಸದ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಕ.ರಾ.ಮೀ.ಪೊ. ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 02.07.2012ರ ಆದೇಶದಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಬಾಧಕವಾಗದಂತೆ 03 (ಮೂರು) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಕಾಲವಿಳಂಬವಾಗಿ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ದಿನಾಂಕ 19.02.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಕಡತದಲ್ಲಿನ ಲಭ್ಯ ಮಾಹಿತಿಗಳನ್ವಯ, ವಾಹನ ಚಾಲಕರ ಹೇಳಿಕೆಯಿಂದ ಅರ್ಜಿದಾರರು ಕಮಾಂಡೆಂಟ್‌ರವರಿಗೆ ಗೌರವ ವಂದನೆ ಸಲ್ಲಿಸಿರುವುದಿಲ್ಲ ಎಂಬ ತೀರ್ಮಾನಕ್ಕೆ ಬಂದಿರುವುದು ಸೂಕ್ತ ಕಂಡುಬಂದಿರುವುದಿಲ್ಲ. ಈ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 58 ಪೊಸಿಅ 2013 ಬೆಂಗಳೂರು, ದಿನಾಂಕ: 13.01.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಬಸವನಗೌಡ, ಪಿಸಿ–539, 7ನೇ ಪಡೆ, ಕೆಎಸ್‌ಆರ್‌ಪಿ, ಮಂಗಳೂರು ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯ ಬದಲಾಗಿ ಇವರಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳ 23(1)(a)(i) ರನ್ವಯ **"ವಾಗ್ದಂಡನೆ"** (censure) ವಿಧಿಸಿ ಮಾರ್ಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.167

SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎನ್.ಜಿ. ಭಾಸ್ಕರ್ ರೈ, ಪಿ.ಐ., ಕರಾವಳಿ ಕಾವಲು ಪಡೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(5)53/2011–12 (ಓ.ಬಿ. ಸಂಖ್ಯೆ: 198/2012) ದಿನಾಂಕ 29.11.2012
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 06.06.2013
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(5)53/2011–12 ದಿನಾಂಕ 19.08.2013
4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 166 ಸಿಎನ್‌ಎಸ್ 2013 ದಿನಾಂಕ: 14.02.2014

**ಪ್ರಸ್ತಾವನೆ:**

ಶ್ರೀ ಎನ್.ಜಿ. ಭಾಸ್ಕರ್ ರೈ, ಪಿ.ಐ., ಕರಾವಳಿ ಕಾವಲು ಪಡೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರು ಈ ಹಿಂದೆ ಬಳ್ಳಾರಿಯ ಬ್ರೂಸ್ ಪೇಟೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯಲೋಪ, ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಮತ್ತು ಅಧಿಕಾರಿ ದುರುಪಯೋಗ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಎನ್. ಜಿ. ಭಾಸ್ಕರ್ ರೈ, ಪೊಲೀಸ್ ಇನ್ಸ್‌ಪೆಕ್ಟರ್ ಆದ ನೀವು ಬಳ್ಳಾರಿಯ ಬ್ರೂಸ್ ಪೇಟೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 05.09.2011 ರಿಂದ ಶ್ರೀ ಜರ್ನಾರ್ಧನ ರೆಡ್ಡಿ, ಮಾಜಿ ಸಚಿವರನ್ನು ಸಿಬಿಐ ರವರು ಬಂಧಿಸಿದ ಹಿನ್ನೆಲೆಯಲ್ಲಿ ದಿನಾಂಕ: 06.09.2011 ರಂದು ಬಳ್ಳಾರಿಯಲ್ಲಿ ಕರೆಯಲಾದ ಬಂದ್‌ಗೆ ಸಂಬಂಧಿಸಿದಂತೆ ದಿನಾಂಕ: 06.09.2011ರ

ಬೆಳಿಗ್ಗೆ 11–00ರ ಸುಮಾರಿನಲ್ಲಿ ಕೆಲವು ದುಷ್ಕರ್ಮಿಗಳು ಸರ್ಕಾರಿ ಕಛೇರಿಗಳಾದ ಡಿಯುಡಿಸಿ, ಆರ್‌ಟಿಓ, ಅರಣ್ಯ ಮತ್ತು ಎಸಿ ಕಛೇರಿಗಳಿಗೆ ನುಗ್ಗಿ ಸರ್ಕಾರದ ಆಸ್ತಿಯನ್ನು ಹಾಳುಗಡೆವಿದ್ದಲ್ಲದೆ, ಸಾರ್ವಜನಿಕ ಬಸ್‌ಗಳಿಗೆ ಕಲ್ಲು ತೂರಿ ಗಲಭೆ ಉಂಟು ಮಾಡುತ್ತಿದ್ದ ಕಾರಣ ಆರೋಪಿಗಳನ್ನು ಕೂಡಲೇ ದಸ್ತಗಿರಿ ಮಾಡುವಂತೆ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ರವರು ನಿಸ್ತಂತು ಮೂಲಕ ಆದೇಶ ನೀಡಿರುತ್ತಾರೆ. ಬ್ರೂಸ್‌ಪೇಟೆ ಠಾಣಾ ವ್ಯಾಪ್ತಿಯ ಮೇಲುಸ್ತುವಾರಿ ಅಧಿಕಾರಿಯಾದ ನೀವು ಬಂದ್ ಕಾರಣ ಮುಂಜಾಗರೂಕತಾ ಕ್ರಮವಾಗಿ ಸೂಕ್ತ ಬಂದೋಬಸ್ತ್ ಏರ್ಪಡಿಸಿ, ಗಲಭೆ ಕೋರರನ್ನು ಬಂಧಿಸುವ ಬಗ್ಗೆ ಕ್ರಮ ಜರುಗಿಸಿರುವುದಿಲ್ಲ. ದುಷ್ಕರ್ಮಿಗಳು ಸರ್ಕಾರಿ ಕಛೇರಿಗಳಿಗೆ ನುಗ್ಗಿ, ದೊಂಬಿ–ಗಲಭೆ ನಡೆಸುತ್ತಿದ್ದರೂ ಸಹ ಮೇಲಾಧಿಕಾರಿಗಳಿಗೆ ಯಾವುದೇ ರೀತಿಯ ಮಾಹಿತಿಯನ್ನು ನೀಡದೆ, ಅಹಿತಕರ ಘಟನೆಗಳ ಬಗ್ಗೆ ಮೇಲಾಧಿಕಾರಿಗಳನ್ನು ಅಂಧಕಾರದಲ್ಲಿರಿಸಿ, ನಿಮ್ಮ ಕರ್ತವ್ಯದಲ್ಲಿ ಕರ್ತವ್ಯಲೋಪ, ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 29.11.2012ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವೇತನಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ ಮೇಲ್ಮನವಿದಾರರು ಗಲಭೆಕೋರರನ್ನು ಒಂದು ದಿನ ವಿಳಂಬವಾಗಿ ಬಂಧಿಸಿದ ಕಾರಣದ ಮೇಲೆ ದಂಡನೆ ವಿಧಿಸಿದ್ದು, ದಿನಾಂಕ 05.09.2011ರಂದು ಆ.ಪೊ.ಅ.ರವರು ಬಂದೋಬಸ್ತ್ ಕಾರ್ಯ ನಿರತರಾಗಿರುವುದನ್ನು ಹಾಗೂ ಗಲಭೆಕೋರ ಆರೋಪಿಗಳನ್ನು ದಿನಾಂಕ 06.09.2011ರಂದು ಬಂಧಿಸಿರುವುದನ್ನು ಪರಿಗಣಿಸಿ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 70 ಪೊಸಿಅ 2013 ಬೆಂಗಳೂರು, ದಿನಾಂಕ: 19.02.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಜಿ. ಭಾಸ್ಕರ್ ರೈ, ಪಿ.ಐ., ಕರಾವಳಿ ಕಾವಲು ಪಡೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯ ಬದಲಾಗಿ ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)(a)(i) ರನ್ವಯ ವಾಗ್ದಂಡನೆ (censure) ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

PR.209

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಎಂ. ತಹಶೀಲ್ದಾರ, ವೃತ್ತ ಪೊಲೀಸ್ ನಿರೀಕ್ಷಕರು, ಬಳ್ಳಾರಿ ಗ್ರಾಮೀಣ ವೃತ್ತ, ಬಳ್ಳಾರಿ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಅಬಕಾರಿ ಜಾರಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ(1) 28/2011–12 ದಿನಾಂಕ 18.12.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)09/2011–12 (ಓ.ಬಿ. ಸಂಖ್ಯೆ: 168/2013) ದಿನಾಂಕ 27.05.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13.09.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)09/2011–12 ದಿನಾಂಕ 06.02.2014

**ಪ್ರಸ್ತಾವನೆ:**

ಶ್ರೀ ಎಸ್.ಎಂ. ತಹಶೀಲ್ದಾರ, ವೃತ್ತ ಪೊಲೀಸ್ ನಿರೀಕ್ಷಕರು, ಬಳ್ಳಾರಿ ಗ್ರಾಮೀಣ ವೃತ್ತ, ಬಳ್ಳಾರಿ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಯಮಕನಮರಡಿ ಪೊಲೀಸ್ ಠಾಣೆ, ಬೆಳಗಾವಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ದುರ್ನಡತೆ, ನಿರ್ಲಕ್ಷ್ಯತೆ ಮತ್ತು ಕರ್ತವ್ಯಲೋಪವೆಸಗಿದ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ದಿನಾಂಕ 13.04.2005ರಂದು ಎ.ಆರ್.ಟಿ.ಓ. ಗೋಕಾಕ ರವರು ನೀಡಿದ ಅಪಘಾತದಲ್ಲಿ ಒಳಗಾದ ವಾಹನಗಳ ಪರೀಕ್ಷೆ ಮಾಡಿ ಪ್ರಮಾಣ ಪತ್ರ ನೀಡಿದ್ದು, ಅದರಲ್ಲಿ ಪಿ.ಎಸ್.ಐ., ಯಮಕನಮರಡಿ ಪಿ.ಎಸ್.ಐ., ನೀವು ದಿನಾಂಕ 13.04.2005ರಂದು ಸ್ವೀಕೃತ ಮಾಡಿಕೊಂಡಿದ್ದು ಅದರಲ್ಲಿ ನಿಮಗೆ ಹಿರಿಯ ಐ.ಎಂ.ವಿ. ಗೋಕಾಕ ರವರು ಅಪಘಾತದಲ್ಲಿ ಒಳಗಾದ ವಾಹನಗಳನ್ನು ಬಿಡುಗಡೆ ಮಾಡುವ ಮೊದಲು ವಾಹನಗಳ ದಾಖಲಾತಿಗಳನ್ನು ಮತ್ತು ಮೋಟಾರ್ ಡ್ರೈವಿಂಗ್ ಲೈಸೆನ್ಸ್‌ಗಳನ್ನು

ಪರಿಶೀಲನೆ ಮಾಡಿ ಬಿಡುಗಡೆಮಾಡಲು ವಿನಂತಿಸಿಕೊಂಡರೂ ಕೂಡಾ ಗೂಡ್ಸ್‌ಟೆಂಪೋ ಚಾಲಕ ಶ್ರೀಕಾಂತ್ ಕಿಶನ್ ಕದಮ್ ಈತನ ಮೋಟಾರ್ ಡ್ರೈವಿಂಗ್ ಲೈಸೆನ್ಸ್ ಅವಧಿ ಮುಗಿದಿದ್ದು ರಿನಿವಲ್ ಮಾಡಿಸದೇ ಇದ್ದರೂ ಕೂಡಾ ನೀವು ಅದನ್ನು ಪರಿಶೀಲನೆ ಮಾಡದೆ ಆ ಬಗ್ಗೆ ಆರೋಪಿತರ ಮೇಲೆ ಕ್ರಮ ಜರುಗಿಸದೆ ಹಾಗೂ ಲೈಸೆನ್ಸ್ ನವೀಕರಿಸದೇ ಇರುವ ಚಾಲಕನ ಲೈಸೆನ್ಸ್ ಹೊಂದಿರದ ವ್ಯಕ್ತಿಗೆ ತನ್ನ ಟೆಂಪೋ ಚಲಾಯಿಸಲು ಕೊಟ್ಟ ಟೆಂಪೋ ಮಾಲಿಕ ಅರುಣ ಕೇಶವ ಜೋಶಿ ಸಾ॥ ಸಾತಾರಾ ಇವನ ಮೇಲೆ ಚಾರ್ಜ್‌ಶೀಟ್ ಕೋರ್ಟಿಗೆ ಕಳಿಸದೇ ಕರ್ತವ್ಯ ಲೋಪ ಎಸಗಿರುತ್ತೀರಿ.

ಆ.ಪೊ.ಅ.ಆದ ನೀವು ದಿನಾಂಕ 12.04.2005ರಂದು ಡಾ॥ ಕೊಪ್ಪರವರ ಆಸ್ಪತ್ರೆಗೆ ಭೆಟ್ಟಿಕೊಟ್ಟು ದಿನಾಂಕ 11.04.2005ರಂದು ಬೆಳಗಿನ 6 ಘಂಟೆಗೆ ಡಾ॥ ಕೊಪ್ಪ ಆಸ್ಪತ್ರೆಗೆ 8 ಜನ ಗಾಯಾಳುಗಳನ್ನು ಉಪಚಾರ ಕುರಿತು 1) ಶಂಕರ ವಿಠ್ಠಲ ಪೂಜರಿ 2) ಕರೆಪ್ಪಾ ಪೂಜಾರಿ 3) ರಾಮಪ್ಪಾ ಅಂಗಡಿ 4) ದುಂಡಪ್ಪಾ ಸತ್ತಿಗೇರಿ 5) ಬಸಪ್ಪಾ ಕಳ್ಳಿಗುಡ್ಡ ಇವರುಗಳು ತಂದು ದಾಖಲು ಮಾಡಿದ್ದು ನಮೂದ ಇದ್ದು, ಈ ಗಾಯಾಳುಗಳನ್ನು ತಂದು ದಾಖಲು ಮಾಡಿದವರು ಅಪಘಾತ ನಡೆದಾಗ ಎಲ್ಲಿದ್ದರು? ಎಲ್ಲಿಂದ ಬಂದಿದ್ದರು? ಅವರಿಗೆ ಅಪಘಾತದ ಸಂಗತಿ ಹೇಗೆ ಗೊತ್ತಾಯಿತಿ? 8 ಜನ ದುಃಖಾಪತಿಗಳನ್ನು ಅವರು ಅಪಘಾತ ಸ್ಥಳದಿಂದ ಗೋಕಾಕ ಡಾ॥ ಕೊಪ್ಪ ಆಸ್ಪತ್ರೆಗೆ ಯಾವ ವಾಹನದಲ್ಲಿ ಕರೆದುಕೊಂಡು ಹೋದರು? ಗೋಕಾಕಕ್ಕೆ ಯಾವಾಗ ತಂದು ದಾಖಲು ಮಾಡಿದರು? ಎಂಬುವ ಬಗ್ಗೆ ನೀವು ಅವರಿಗೆ ಮತ್ತು ಗಾಯಾಳುಗಳಿಗೆ ಪ್ರಶ್ನೆ ಮಾಡಿ ಅವರ ಹೇಳಿಕೆಗಳನ್ನು ಉದ್ದೇಶ ಪೂರ್ವಕವಾಗಿ ಬರೆದುಕೊಳ್ಳದೇ ಲೋಪ ಎಸಗಿರುತ್ತೀರಿ.

ಆ.ಪೊ.ಅ. ಆದ ನೀವು ಯಮಕನಮರಡಿ ಪೊಲೀಸ್ ಠಾಣೆ ಗುನ್ನಾ ನಂ: 56/2005 ಕಲಂ 279, 337, 338 ಐ.ಪಿ.ಸಿ. ನೇದ್ದರ ತನಿಖಾ ಅಧಿಕಾರಿಗಳಾಗಿದ್ದು ಸದರಿ ಅಪಘಾತದಲ್ಲಿ ದುಃಖಾಪತಿ ಹೊಂದಿತ ಅಸಲಿ ಗಾಯಾಳುಗಳಿಗೆ ಮೋಟಾರು ವಾಹನ ಅಪಘಾತ ಪರಿಹಾರ ಕ್ಲೇಮು ಮಾಡುವ ಸಲುವಾಗಿ ತಿಳುವಳಿಕೆ ನೋಟಿಸ್ಸುಗಳನ್ನು ನಮೂನೆ ಸಂಖ್ಯೆ-54(ನಿಯಮ 150(ಎ) ಮತ್ತು (2)ನ್ನು ನೋಡಿ) ಕರ್ನಾಟಕ ಕಾನೂನು ನೆರವು ಯೋಜನೆ 1983 (ಮೋಟಾರು ವಾಹನ ಅಪಘಾತ ಪರಿಹಾರದ ಕ್ಲೇಮುಗಳು) ನಿಯಮ 3(2) ಮೋಟಾರು ವಾಹನದಿಂದಾಗಿ ಅಪಘಾತದ ಸೂಚನಾ ಪತ್ರ (ತಿಳುವಳಿಕೆ) ನೋಟೀಸು ಅ ನಂ-1ರಿಂದ 13ರವರೆಗಿನ ಕಾಲಂಗಳನ್ನು ಭರ್ತಿಮಾಡಿ (ತುಂಬಿ) ನೀಡದೇ ನಿಮ್ಮ ತನಿಖಾಧಿಕಾರಿಯ ಜವಾಬ್ದಾರಿ ಕರ್ತವ್ಯವನ್ನು ಬುದ್ಯಾ ಪೂರ್ವಕ ನಿರ್ವಹಿಸದೇ ಮುಖ್ಯ ಅಪರಾಧಿಗಳ ಕೂಡ ಅಪರಾಧಿಕ ಒಳಸಂಚು ಮಾಡಿ ರೂ.61,82,627/- ವಂಚನೆ ಆಗಿ ಕಾಯ್ದೆಬದ್ಧವಾಗಿ ಹಣ ಅಸಲಿ ಗಾಯಾಳುಗಳಿಗೆ ಮುಟ್ಟದೆ ಅವರ ಬದಲಿಗೆ ಬೇರೆಯವರು ಗಾಯಾಳುಗಳು ತಾವೆಂದು ನಟಿಸಿ ವಂಚನೆಯಿಂದ ರೂ.61,82,627/-ಹಣ ಪಡೆದು ನ್ಯಾಯಾಲಯಗಳಿಗೂ ವಂಚಿಸಿ, ಅಶ್ಯೂರೆನ್ಸ್ ಕಂಪನಿಗೆ ನಷ್ಟವನ್ನುಂಟು ಮಾಡಲು ಕಾರಣಕರ್ತರಾಗಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಭಾಗಶಃ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಅಬಕಾರಿ ಜಾರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 18.12.2012ರ ಆದೇಶದಲ್ಲಿ ಇವರು ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ (ಪಿಐ ಹುದ್ದೆಯ ವೇತನ ಶ್ರೇಣಿ 21,600-600-24,600-700-28,800-800-33,600-900-39,000-1050-40,050) ಪ್ರಸ್ತುತ ರೂ.24,600/-ಗಳ ವೇತನ ಪಡೆಯುತ್ತಿದ್ದು, ಇವರ ವೇತನವನ್ನು ಮೊದಲನೆ ಹಂತಕ್ಕೆ ಅಂದರೆ 21,600/-ಕ್ಕೆ 2 ವರ್ಷಗಳವರೆಗೆ ಸಂಚಿತ ಪರಿಣಾಮ ಬೀರುವಂತೆ ಕೆಳಗಿಳಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 27.05.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಈ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 136 ಪೊಸಿಅ 2013 ಬೆಂಗಳೂರು, ದಿನಾಂಕ: 18.02.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ತಹಶೀಲ್ದಾರ, ವೃತ್ತ ಪೊಲೀಸ್ ನಿರೀಕ್ಷಕರು, ಬಳ್ಳಾರಿ ಗ್ರಾಮೀಣ ವೃತ್ತ, ಬಳ್ಳಾರಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಬಿ)

**PR.212**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಿವಪ್ಪ, ಎಪಿಸಿ-52/310, ಡಿಎಆರ್ ಕೇಂದ್ರ ಸ್ಥಾನ, ಗುಲಬರ್ಗಾ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲಬರ್ಗಾ ಇವರ ಆದೇಶ ಸಂಖ್ಯೆ ಡಿಇ/47/2009 ಡಿಒಬಿ ಸಂ/1637/2009 ದಿನಾಂಕ 26.09.2009

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/121/ಈವ/2012/307 (ಆ.ಪು.ಸಂ.98/ಈವ/2013) ದಿನಾಂಕ 13.02.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13.05.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)12/2013–14 ದಿನಾಂಕ 30.07.2013 ಮತ್ತು 29.10.2013

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 192 ಸಿಎನ್‌ಎಸ್ 2013 ದಿನಾಂಕ: 28.01.2014

**ಪ್ರಸ್ತಾವನೆ:**

ಶ್ರೀ ಶಿವಪ್ಪ, ಎಪಿಸಿ–52/310, ಡಿಎಆರ್. ಗುಲಬರ್ಗಾ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಶಹಾಬಾದ್ ಡಿ.ಎಸ್.ಪಿ. ಇವರ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ಶಹಬಾದ ಡಿ.ಎಸ್.ಪಿ.ರವರ ಜೀಪ್ ಸಂಖ್ಯೆ ಕೆಎ32–ಜಿ430ರ ಚಾಲಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ 07.08.2009ರಂದು ಬಂಕೂರ ಸಮೀಪ ರಸ್ತೆಯ ಬದಿಗೆ ವಾಹನ ನಿಲ್ಲಿಸಲು ನಿಮಗೆ ಹೇಳಿದರೂ ನೀವು ವಾಹನ ನಿಲ್ಲಿಸದೆ ಹಾಗೆ ಮುಂದೆ ಹೋಗಿ ಒರುಟುತನದಿಂದ ನಿಮ್ಮ ಹಿರಿಯ ಅಧಿಕಾರಿಯವರೊಡನೆ ಅಸಭ್ಯವಾಗಿ ನಡೆದುಕೊಂಡು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 26.09.2009ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು (1) ವರ್ಷ ಕಾಲ ಮುಂದೂಡಿ ಇವರ ಅಮಾನತ್ತಿನ ದಿನಾಂಕ 16.08.2009ರಿಂದ 25.09.2009ರವರೆಗೆ ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ದಿನಾಂಕ 13.02.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ವಾಹನ ಚಾಲಕರು ಮೇಲಾಧಿಕಾರಿಗಳನ್ನು ಕರೆದೊಯ್ಯುವಾಗ ಅವರ ಸೂಚನೆಯಂತೆ ಕರ್ತವ್ಯ ನಿರ್ವಹಿಸಬೇಕಾಗಿರುತ್ತದೆ. ಆದರೆ ಸದರಿ ಪ್ರಕರಣದಲ್ಲಿ ವಾಹನ ಚಾಲಕರ ಕರ್ತವ್ಯಲೋಪ ಇದ್ದರೂ ಮೇಲಾಧಿಕಾರಿಗಳೊಂದಿಗೆ ಸಮನ್ವಯ ಕೊರತೆ ಕಂಡುಬರುತ್ತದೆ. ಪಿ.ಸಿ.ಹುದ್ದೆಯ ಆ.ಪೊ.ಅ.ರವರು ಎಸಗಿರುವ ಲೋಪಕ್ಕೆ ಸಂಬಂಧಿಸಿದಂತೆ ವಿಧಿಸಿರುವ ದಂಡನೆಯು ಹೆಚ್ಚಾಗಿರುವುದಾಗಿ ಕಂಡು ಬಂದಿರುವ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 55 ಪೊಸಿಅ 2013 ಬೆಂಗಳೂರು, ದಿನಾಂಕ: 07.02.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಪ್ಪ, ಎಪಿಸಿ–52/310, ಡಿಎಆರ್ ಕೇಂದ್ರ ಸ್ಥಾನ, ಗುಲಬರ್ಗಾ ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯ ಬದಲಾಗಿ ಇವರಿಗೆ ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)(a)(i) ರನ್ವಯ ಇವರಿಗೆ ವಾಗ್ದಂಡನೆ (censure) ವಿಧಿಸಿ ದಿನಾಂಕ 16.08.2009ರಿಂದ 25.09.2009ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.213**

**SC.30**

## ಒಳಾಡಳಿತ ಸಚಿವಾಲಯ

**ವಿಷಯ:** ದಿನಾಂಕ 08/01/2014ರಂದು ಗುಲ್ಬರ್ಗಾ ನಗರದ ರೋಜಾ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ನಡೆದ ಶೂಟೌಟ್ ಪ್ರಕರಣದ ಬಗ್ಗೆ.

**ಓದಲಾಗಿದೆ:** ಸರ್ಕಾರದ ಸಮ ಸಂಖ್ಯೆ ಆದೇಶ ಸಂಖ್ಯೆ: ಹೆಚ್‌ಡಿ 1 ಪಿಸಿಇ 2014, ಬೆಂಗಳೂರು ದಿನಾಂಕ 27/01/2014.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 27/01/2014 ಸರ್ಕಾರಿ ಆದೇಶದಲ್ಲಿ ದಿನಾಂಕ 08/01/2014ರಂದು ಗುಲ್ಬರ್ಗಾ ನಗರದ ರೋಜಾ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ನಡೆದ ಶೂಟೌಟ್ ಪ್ರಕರಣದಲ್ಲಿ ಈ ಕೆಳಕಂಡಂತೆ ಪರಿಹಾರ ನೀಡಿ ಆದೇಶ ಹೊರಡಿಸಲಾಗಿತ್ತು.

1) ಮೃತಪಟ್ಟ ದಿವಂಗತ ಮಲ್ಲಿಕಾರ್ಜುನ ಬಂಡೆ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ ರೂ.50.00ಲಕ್ಷ ಪರಿಹಾರ

2) ಸಾಧಾರಣ ಗಾಯಗೊಂಡು ಚಿಕಿತ್ಸೆ ಪಡೆದಿರುವ ಶ್ರೀ ಮುರಳಿ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ ಒಂದು ಲಕ್ಷ ರೂಪಾಯಿಗಳ ಅನುಗ್ರಹ ಪೂರ್ವಕ ಪರಿಹಾರ. ಮತ್ತು

3) ತೀವ್ರವಾಗಿ ಗಾಯಗೊಂಡು ಚಿಕಿತ್ಸೆ ಪಡೆದಿರುವ ಶ್ರೀ ಉದ್ದಂಡಪ್ಪ, ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ ಎರಡು ಲಕ್ಷ ರೂಪಾಯಿಗಳ ಅನುಗ್ರಹ ಪೂರ್ವಕ ಪರಿಹಾರ.

ಶ್ರೀ ಉದ್ದಂಡಪ್ಪ, ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಜೀವದ ಹಂಗುತೊರೆದು ಸಾವು–ಗೆಲುವಿನ ನಡುವೆ ಹೋರಾಡಿ ಪ್ರಕರಣದಲ್ಲಿ ಅವರ ಶೌರ್ಯ ಸಾಹಸ ತೋರಿ, ತೀವ್ರವಾಗಿ ಗಾಯಗೊಂಡು ಚೇತರಿಸಿಕೊಳ್ಳುತ್ತಿದ್ದಾರೆ. ಇವರಿಗೆ ನೀಡಿದ ಪರಿಹಾರವನ್ನು ಪರಿಷ್ಕರಿಸಿ ಆದೇಶ ಹೊರಡಿಸಲು ಸರ್ಕಾರವು ನಿರ್ಧರಿಸಿದ್ದು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 1 ಪಿಸಿಇ 2014, ಬೆಂಗಳೂರು ದಿನಾಂಕ 17/02/2014**

ಸರ್ಕಾರವು ಶ್ರೀ ಉದ್ದಂಡಪ್ಪ, ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗಾ ಇವರಿಗೆ ನೀಡಿರುವ ಎರಡು ಲಕ್ಷ ರೂಪಾಯಿಗಳ ಅನುಗ್ರಹ ಪೂರ್ವಕ ಪರಿಹಾರ ಬದಲಿಗೆ ಈಗ ರೂ.5.00ಲಕ್ಷ (ರೂಪಾಯಿ ಐದು ಲಕ್ಷ ಮಾತ್ರ) ಪರಿಹಾರವನ್ನು ನೀಡಲು ಆದೇಶಿಸಿದೆ.

2. ಮೇಲ್ಕಂಡ ಪರಿಹಾರ ಮೊತ್ತವನ್ನು **ಲೆಕ್ಕ ಶೀರ್ಷಿಕೆ 2055–00–109–1–01–051 ಸಾಮಾನ್ಯ ವೆಚ್ಚಗಳು,** ಅಡಿಯಲ್ಲಿ ಭರಿಸಿ ವಿತರಿಸಲು ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರಿಗೆ ಆದೇಶಿಸಿದೆ.

3. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27/01/2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)

PR.211

SC.50

**ಒಳಾಡಳಿತ ಸಚಿವಾಲಯ**

**ವಿಷಯ:** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೋಲಿಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ.ಜಿ.ಕೆ.ಬೇಕಲ್, ವಕೀಲರು(ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012 ದಿನಾಂಕ 09/03/2012.
2. ದಿನಾಂಕ: 13/08/2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ.ಬೇಕಲ್, ವಕೀಲರು, ನಿವೃತ್ತ ಉಪ ಪೋಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ 30/10/2013, 30/11/2013 ಮತ್ತು 27/12/2013.
4. ಮಹಾಲೇಖಪಾಲರ ಕಛೇರಿ ಪತ್ರ ಸಂ :Pr.AG(G&SSA)/13-14/CASS-I/A10/145 ದಿನಾಂಕ 21/22/10/2013.

**ಪ್ರಸ್ತಾವನೆ:**

ದಿನಾಂಕ:02/03/2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೋಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ.ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ(1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ.ಜಿ.ಕೆ.ಬೇಕಲ್, ವಕೀಲರು(ನಿವೃತ್ತ ಉಪ ಪೋಲೀಸ್ ಆಯುಕ್ತರು), ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ.ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ(2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ.ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ **ಅಕ್ಟೋಬರ್ ತಿಂಗಳಲ್ಲಿ,** ದಿನಾಂಕ 07/10/2013, 08/10/2013, 09/10/2013, 21/10/2013, 22/10/2013, 23/10/2013, 28/10/2013, 29/10/2013, & 30/10/2013, **09 ಮಹತ್ವದ ದಿನಗಳು, ನವೆಂಬರ್ ತಿಂಗಳಲ್ಲಿ** ದಿನಾಂಕ 06/11/2013, 07/11/2013, 11/11/2013, 12/11/2013, 13/11/2013, 18/11/2013, 19/11/2013, 21/11/2013, 25/11/2013, 26/11/2013, 29/11/2013 & 30/11/2013, **12ಮಹತ್ವದ ದಿನಗಳು ಹಾಗೂ ಡಿಸೆಂಬರ್ ತಿಂಗಳಲ್ಲಿ** ದಿನಾಂಕ 04/12/2013, 05/12/2013, 06/12/2013, 13/12/2013, 18/12/2013, **5 ಮಹತ್ವದ ದಿನಗಳು** ಮತ್ತು ದಿನಾಂಕ 12/12/2013, 17/12/2013, 23/12/2013, **3 ಮಹತ್ವವಲ್ಲದ ದಿನಗಳು ವಾದಿಸಿದ ಸಲುವಾಗಿ**

**ಸಂಭಾವನೆಯಾಗಿ ಒಟ್ಟು ರೂ.2,78,000/–(ರೂಪಾಯಿ ಎರಡು ಲಕ್ಷದ ಎಪ್ಪತ್ತೆಂಟು ಸಾವಿರಗಳು ಮಾತ್ರ)**ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ(3)ರ ಪತ್ರಗಳಲ್ಲಿ ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖಿತ(4)ರ ಮಹಾಲೇಖಪಾಲರ ಪತ್ರದಲ್ಲಿ ಸರ್ಕಾರಿ ವಕೀಲರಿಗೆ ನೀಡುವ ಸಂಭಾವನೆಯಲ್ಲಿ ಶೇಕಡ 1%ರ ಮೊತ್ತವನ್ನು ಟಿ.ಡಿ.ಎಸ್.ಆಗಿ ಕಡಿತಗೊಳಿಸಬೇಕೆಂದು ಸೂಚಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು ದಿನಾಂಕ 30/01/2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ.ಬೇಕಲ್, ವಕೀಲರು(ನಿವೃತ್ತ ಉಪ ಪೋಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1. | Effective hearing (09days) dated: 07/10/2013, 08/10/2013, 09/10/2013, 21/10/2013, 22/10/2013, 23/10/2013, 28/10/2013, 29/10/2013, & 30/10/2013, @ Rs.10,000/- per day | 90,000–00 |
| 2. | Effective hearing (12days) dated: 06/11/2013, 07/11/2013, 11/11/2013, 12/11/2013, 13/11/2013, 18/11/2013, 19/11/2013, 21/11/2013, 25/11/2013, 26/11/2013, 29/11/2013 & 30/11/2013 @ Rs.10,000/- per day | 1,20,000–00 |
| 3. | **Effective hearing (5days) dated:** 04/12/2013, 05/12/2013, 06/12/2013, 13/12/2013, 18/12/2013 @ Rs.10,000/- per day.<br>**Non-effective hearing (3 days) dated:** 12/12/2013, 17/12/2013, 23/12/2013 @ Rs.6,000/- per day. | 50,000–00<br>18,000–00 |
| | **ಒಟ್ಟು ಮೊತ್ತ (ಎರಡು ಲಕ್ಷದ ಎಪ್ಪತ್ತೆಂಟು ಸಾವಿರ ಮಾತ್ರ)** | **2,78,000–00** |

ಮಹಾಲೇಖಪಾಲರು, ಕರ್ನಾಟಕ ಇವರ ಸೂಚನೆಯನ್ವಯ ಈಗಾಗಲೇ ಶ್ರೀ ಜಿ.ಕೆ.ಬೇಕಲ್‌ರವರಿಗೆ ಸಂಭಾವನೆಯ ಮೊತ್ತದ ರೂ.5,62,000/– ಗಳನ್ನು ನೀಡಲಾಗಿದೆ. ಮತ್ತು ಈಗ ಮಂಜೂರು ಮಾಡಲಾದ ಮೊತ್ತ ರೂ.2,78,000/–, ದಿನಾಂಕ 21/10/2013ರಂದು ಹೊರಡಿಸಲಾದ ಆದೇಶದಲ್ಲಿ ರೂ.1,40,000/– ಗಳಿಗೆ ಮಂಜೂರಾತಿ ನೀಡಲಾಗಿದೆ(5,62,000+1,40,000+2,78,000,=9,80,000/–). ಈ ಮೊತ್ತಕ್ಕೆ ಶೇಕಡ 1% ಟಿ.ಡಿ.ಎಸ್. ಹಣವನ್ನು ಕಡಿತಗೊಳಿಸಿ ಅಂದರೆ **ರೂ.9,800/– (ರೂಪಾಯಿ ಒಂಬತ್ತು ಸಾವಿರದ ಎಂಟು ನೂರು ಮಾತ್ರ)** ಗಳನ್ನು **'Head of Account-0021 taxes on Income'ಗೆ ಪಾವತಿಸಲು** ತಿಳಿಸಲಾಗಿದೆ. **ಬಾಕಿ ಹಣ ರೂ.2,68,200/– (ರೂಪಾಯಿ ಎರಡು ಲಕ್ಷ ಅರವತ್ತೆಂಟು ಸಾವಿರದ ಎರಡುನೂರು ಮಾತ್ರ)ಗಳನ್ನು ಮಂಜೂರು ಮಾಡಲಾಗಿದೆ.**

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ(ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27/01/2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)

**PR.216**

**SC.50**

## ಒಳಾಡಳಿತ ಸಚಿವಾಲಯ

**ವಿಷಯ:–** ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 09/03/2012
2) ಅಧಿಸೂಚನೆ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ದಿನಾಂಕ 03/12/2013
3) ಕಾರ್ಯದರ್ಶಿ, ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗರವರ ಪತ್ರ ಸಂಖ್ಯೆ:ಆರ್‌ಜಿವಿಸಿ ನಂ.150/2014, ದಿನಾಂಕ 23/01/2014.

**ಪ್ರಸ್ತಾವನೆ:**

ದಿನಾಂಕ:02/03/2012ರಂದು ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೋಲೀಸರ ನಡುವೆ ನಡೆದ ಘರ್ಷಣೆಯ ಕುರಿತು ಸತ್ಯಾ ಸತ್ಯತೆಯನ್ನು ತಿಳಿದುಕೊಳ್ಳಲು ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ನಿವೃತ್ತ ನ್ಯಾಯಾಧೀಶರು ಇವರ ನೇತೃತ್ವದಲ್ಲಿ ಏಕ ಸದಸ್ಯ ವಿಚಾರಣಾ ಆಯೋಗವನ್ನು ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗದ ಅವಧಿಯನ್ನು ದಿನಾಂಕ 30/06/2014ರವರೆಗೆ ವಿಸ್ತರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ನ್ಯಾಯಮೂರ್ತಿ ಆರ್.ಜಿ.ವೈದ್ಯನಾಥ ವಿಚಾರಣಾ ಆಯೋಗ ಅವರು ರೂ.8,00,000/-ಗಳ ಅನುದಾನ ಮಂಜೂರು ಮಾಡಲು ಕೋರಿದ್ದು, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 4 ಪಿಸಿಇ 2012 ಬೆಂಗಳೂರು ದಿನಾಂಕ 29/01/2014**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ನ್ಯಾಯಮೂರ್ತಿ ಶ್ರೀ ಆರ್.ಜಿ.ವೈದ್ಯನಾಥ, ವಿಚಾರಣಾ ಆಯೋಗದ ಅಧ್ಯಕ್ಷರಿಗೆ, ಕಾರ್ಯದರ್ಶಿಯವರಿಗೆ ಹಾಗೂ ಸಿಬ್ಬಂದಿಯ ವೇತನ ವೆಚ್ಚ ಭರಿಸಲು ಅನುಕೂಲವಾಗುವಂತೆ 2013-2014ನೇ ಸಾಲಿಗೆ **₹8,00,000/- (ರೂಪಾಯಿ ಎಂಟು ಲಕ್ಷ ಮಾತ್ರ)ಗಳನ್ನು** ಲೆಕ್ಕ ಶೀರ್ಷಿಕೆ "**2070-00-105-0-02-059 ಇತರ ವಿಚಾರಣಾ ಆಯೋಗ** " ಅಡಿಯಲ್ಲಿ ಭರಿಸುವಂತೆ ಹಣವನ್ನು ಸರ್ಕಾರವು ಮಂಜೂರು ಮಾಡಿದೆ.

ಸದರಿ ಆಯೋಗದ ಕಾರ್ಯದರ್ಶಿಯವರು ಹಣವನ್ನು ಹಿಂತೆಗೆಯುವ ಮತ್ತು ವಿತರಿಸುವ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವರು.

ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10/07/1996ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)

PR.215

SC.25

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಪ್ರಕಾಶ್ ಎಲ್. ಮಾಳಿ, ಪಿಎಸ್‌ಐ, ಹಟ್ಟಿ ಪೊಲೀಸ್ ಠಾಣೆ, ರಾಯಚೂರು (ಪ್ರಸ್ತುತ ಅಳವಂಡಿ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ) ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ** : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬ್ಬಂದಿ-1/64/2012-13, ದಿನಾಂಕ: 21-10-2013.

**ಪ್ರಸ್ತಾವನೆ:**

ಶ್ರೀ ಪ್ರಕಾಶ್ ಎಲ್. ಮಾಳಿ, ಪಿಎಸ್‌ಐ, ಹಟ್ಟಿ ಪೊಲೀಸ್ ಠಾಣೆ, ರಾಯಚೂರು ರವರು ಸೇವಾನಿರತ ಅಭ್ಯರ್ಥಿಗಳಿಗಾಗಿ ನಿಗದಿಪಡಿಸಲಾದ ಪಿ.ಎಸ್.ಐ. ಹುದ್ದೆಯಲ್ಲಿ ದಿನಾಂಕ 03-09-2007 ರಂದು ನೇಮಕಾತಿ ಹೊಂದಿದ್ದು, ಸದರಿಯವರ 2 ½ ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ 03-03-2010 ಕ್ಕೆ ಪೂರ್ಣಗೊಳ್ಳುತ್ತದೆ. ಸದರಿಯವರು ಹುದ್ದೆಗೆ ಸಂಬಂಧಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದು, ಕನ್ನಡ ಭಾಷಾ ಪರೀಕ್ಷೆಯಿಂದ ದಿನಾಂಕ: 23-06-2011 ರಂದು ವಿನಾಯಿತಿ ಪಡೆದಿದ್ದರು ಸಹ ಸದರಿಯವರ ವಿರುದ್ಧ ಚಾಲ್ತಿ ಶಿಕ್ಷೆಯಿರುವುದರಿಂದ, ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ 04-06-2011 ರಿಂದ 03-06-2013 ರವರೆಗೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4 (1)(i) ರನ್ವಯ ವಿಸ್ತರಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 359 ಪೊಸಇ 2013 ಬೆಂಗಳೂರು, ದಿನಾಂಕ: 20-02-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ಶ್ರೀ ಪ್ರಕಾಶ್ ಎಲ್. ಮಾಳಿ, ಪಿಎಸ್‌ಐ, ಹಟ್ಟಿ ಪೊಲೀಸ್ ಠಾಣೆ, ರಾಯಚೂರು (ಪ್ರಸ್ತುತ ಅಳವಂಡಿ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ) ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 04-06-2011 ರಿಂದ 03-06-2013ರವರೆಗೆ ವಿಸ್ತರಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

PR.206

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಎನ್. ಆಂಜನೇಯ, ಪಿಎಸ್‌ಐ, ಸಿರ್ಸಿ ಗ್ರಾಮೀಣ ಪೊಲೀಸ್ ಠಾಣೆ ರವರ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ: ಒಇ 225 ಪೊಸಇ 2008, ದಿನಾಂಕ: 09-08-2010.
2. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಅಪೀಲು(1)44/2008-09, ದಿನಾಂಕ:20-01-2014.
3. ಎನ್. ಆಂಜನೇಯ, ಪಿಎಸ್‌ಐ ರವರ ಮನವಿ ದಿನಾಂಕ: 26-12-2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಲೋಕಾಯುಕ್ತ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಎನ್. ಆಂಜನೇಯ, ಪಿಎಸ್‌ಐ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ಪೊಲೀಸ್ ಕಾಯ್ದೆ–1963 ರ ಕಲಂ 23(1)(ಬಿ)(ಐ)ರನ್ವಯ ಇವರ ವೇತನವನ್ನು ಇವರ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನ ಹಂತಕ್ಕೆ 2 ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಆದರೆ ಸದರಿ ಪಿಎಸ್‌ಐ ರವರು ದಿನಾಂಕ: 05–03–2007 ರಿಂದ 21–1–2008 ರವರೆಗಿನ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸಿರುವುದಿಲ್ಲ, ಸದರಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿ ಅಮಾನತ್ತಿನ ಅವಧಿಯನ್ನು ಇತ್ಯರ್ಥಪಡಿಸುವಂತೆ ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 37 ಪೊಸಇ 2014 ಬೆಂಗಳೂರು, ದಿನಾಂಕ: 20–02–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್. ಆಂಜನೇಯ, ಪಿಎಸ್‌ಐ, ಸಿರ್ಸಿ ಗ್ರಾಮೀಣ ಪೊಲೀಸ್ ಠಾಣೆ, ಹಾಲಿ ಪಿಎಸ್‌ಐ ಅಬಕಾರಿ ಜಾರಿ, ಲಾಟರಿ ನಿಷೇದ ದಳ, ವಿಶೇಷ ಪೊಲೀಸ್‌ಠಾಣೆ, ಕೋಡಿಭಾಗ, ಕಾರವಾರ ಇವರು ದಿನಾಂಕ: 05–03–2007 ರಿಂದ 21–01–2008 ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**PR.208**

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್, ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಕಾರ್ಯದರ್ಶಿ ಇವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ** : ಸರ್ಕಾರದ ಆದೇಶ ಸಂಖ್ಯೆ: ಒಇ 41 ಪೊಸಇ 2013(ಭಾ–3) ಬೆಂಗಳೂರು, ದಿನಾಂಕ: 21–01–2014.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಸರ್ಕಾರವು ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ದಿನಾಂಕ: 02–09–2013 ರಿಂದ ಜಾರಿಗೆ ಬರುವಂತೆ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಕಾರ್ಯದರ್ಶಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ಕೆಸಿಎಸ್‌ಆರ್ ನಿಯಮ 313 ರನ್ವಯ ಪುನರ್ ನೇಮಕ ಮಾಡಿ ಆದೇಶಿಸಿ ಇವರ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು ಎಂದು ತಿಳಿಸಲಾಗಿತ್ತು. ಈಗ ಸದರಿಯವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಅಗತ್ಯವಿದ್ದು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 41 ಪೊಸಇ 2013 (ಭಾ–3) ಬೆಂಗಳೂರು, ದಿನಾಂಕ: 05–02–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತಕಾರ್ಯದರ್ಶಿ, ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್ ರವರ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲಾಗಿದೆ.

ಸೇವಾ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತಿವೆ:–

1) ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 02–09–2013 ರಿಂದ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಗೌರವಾನ್ವಿತ ಅಧ್ಯಕ್ಷರಾದ ನ್ಯಾಯಾಮೂರ್ತಿ ಶ್ರೀ ಎಂ.ಪಿ ಚಿನ್ನಪ್ಪ ಇವರ ಅಧಿಕಾರವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

2) ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 17,670–00 ಮರುನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ಕಾಲ್ಪನಿಕ ಮೂಲ ವೇತನವಾದ ರೂ. 41,100/– ಗಳಿಗೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.

3) ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4) ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್ ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.

5) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

6) ಸದರಿ ನೌಕರರು ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

7) ಸದರಿ ಮರುನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

8) ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.

9) ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.

10) 1966ರ ಕರ್ನಾಟಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

11) ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

12) ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿ ಕೊಡಲು ಅವರು ಹೊಣೆಯಾಗಿರುತ್ತಾರೆ.

13) ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50–00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.217**

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಇವರನ್ನು ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಕಾರ್ಯದರ್ಶಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ** : ಶ್ರೀ ಗೌರವಾನ್ವಿತ ಅಧ್ಯಕ್ಷರಾದ ನ್ಯಾಯಮೂರ್ತಿ ಶ್ರೀ ಎಂ.ಪಿ. ಚಿನ್ನಪ್ಪ, ರಾಜ್ಯ ಪೊಲೀಸ್ ದೂರು ಪ್ರಾಧಿಕಾರದ ಅಧ್ಯಕ್ಷರು ಇವರ ಪತ್ರ ದಿನಾಂಕ: 02–09–2013.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ, ಬೆಂಗಳೂರು ಇವರು ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಆಪ್ತ ಕಾರ್ಯದರ್ಶಿಯನ್ನಾಗಿ ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ಗುತ್ತಿಗೆ ಆಧಾರದ ಮೇಲೆ ದಿನಾಂಕ: 02.09.2013 ರಿಂದ ಜಾರಿಗೆ ಬರುವಂತೆ ನೇಮಕ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 41 ಪೊಸಇ 2013 (ಭಾ–3) ಬೆಂಗಳೂರು, ದಿನಾಂಕ: 21–01–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತಕಾರ್ಯದರ್ಶಿ ಹುದ್ದೆಯಲ್ಲಿ, ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ದಿನಾಂಕ: 02–09–2013 ರಿಂದ ಜಾರಿಗೆ ಬರುವಂತೆ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಗೌರವಾನ್ವಿತ ಅಧ್ಯಕ್ಷರಾದ ನ್ಯಾಯಮೂರ್ತಿ ಶ್ರೀ ಎಂ.ಪಿ. ಚಿನ್ನಪ್ಪ ಇವರ ಅಧಿಕಾರಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಕಾರ್ಯದರ್ಶಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ಕೆಸಿಎಸ್‌ಆರ್ ನಿಯಮ 313 ರನ್ವಯ ಪುನರ್ ನೇಮಕ ಮಾಡಿ ಆದೇಶಿಸಲಾಗಿದೆ.

ಶ್ರೀ ಆರ್ಥರ್ ಹ್ಯಾರಿ ಗೋನ್ಸಾಲ್ವೀಸ್, ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರ ಆಪ್ತಕಾರ್ಯದರ್ಶಿ ಇವರ ಮರು ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.162**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಮಂಗಳೂರು ವಿಮಾನ ನಿಲ್ದಾಣ ವಿಸ್ತರಣೆಗಾಗಿ ಭೂಸ್ವಾಧೀನತೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಕೊಳಂಬೆ ಮತ್ತು ಮಳವೂರು ಪುನರ್ವಸತಿ ಕಾಲೋನಿಗಳಲ್ಲಿ ಕಾಮಗಾರಿಗಳಿಗೆ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರ ಸಂಖ್ಯೆ ಎಲ್‌ಎಕ್ಯೂ ಸಿಆರ್. 61/02-03 ದಿನಾಂಕ 1.1.2005
2. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 46 ರಾಅವಿ 04 ದಿನಾಂಕ 31.5.05
3. ಸರ್ಕಾರಿ ಆದೇಶ ಸಂಖ್ಯೆ ಮೂಅಇ 46 ರಾಅವಿ 04 ದಿನಾಂಕ 30.9.05.
4. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂಖ್ಯೆ:ಎಲ್.ಎ.ಕ್ಯೂ ಸಿಆರ್ 134 /05-06 ದಿನಾಂಕ 12.12.06.
5. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂಖ್ಯೆ ಎಲ್.ಎ.ಕ್ಯೂ ಇತರೆ ಸಿಆರ್ 99 /05-06 ದಿನಾಂಕ 3.7.09.
6. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 2 ರಾಅವಿ 08 ದಿನಾಂಕ 3.8.09
7. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂಖ್ಯೆ ಎಲ್.ಎ.ಕ್ಯೂ ಸಿಆರ್ 99 /05-06 ದಿನಾಂಕ 28.10.09.
8. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂಖ್ಯೆ ಎಲ್.ಎ.ಕ್ಯೂ ಸಿಆರ್.99/05-06 ದಿನಾಂಕ 4.11.09.
9. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 2 ರಾಅವಿ 2008, ದಿನಾಂಕ : 10.11.2009.
10. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್‌ಎಕ್ಯೂ. ಎಂಎಸ್. ಸಿಆರ್. 87/11-12/20 ಸಿ.ಎಫ್.ನಂ. 54358, ದಿನಾಂಕ:08.06.2011.
11. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರ ಸಂಖ್ಯೆ ಎಲ್.ಎಕ್ಯೂ ಎಂಎಸ್‌ಸಿಸಿಆರ್/22/11-12/ಬಿ/56289, ದಿನಾಂಕ:11.08.2011.

**ಪ್ರಸ್ತಾವನೆ:**

ಮಂಗಳೂರು ವಿಮಾನ ನಿಲ್ದಾಣದ ಅಭಿವೃದ್ದಿಗೆ ಅಗತ್ಯವಾದ ಹೆಚ್ಚುವರಿ ಭೂಮಿಯ ಸ್ವಾಧೀನಕ್ಕೆ ಹಾಗೂ ಸಂತ್ರಸ್ಥರ ಕುಟುಂಬದ ಪುನರ್ವಸತಿಗೆ ರೂ. 1078.659 ಲಕ್ಷಗಳ ಬಿಡುಗಡೆಗಾಗಿ ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ 01.01.2005ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಉದ್ದೇಶಕ್ಕಾಗಿ ಕ್ರಮ ಸಂಖ್ಯೆ (2) ರ ದಿನಾಂಕ:31.05.2005ರ ಸರ್ಕಾರಿ ಆದೇಶದಲ್ಲಿ ರೂ. 3.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ನಂತರ ಕ್ರಮ ಸಂಖ್ಯೆ (3)ರ ದಿನಾಂಕ:30.09.2005ರ ಸರ್ಕಾರಿ ಆದೇಶದಲ್ಲಿ ಬಾಕಿ ಮೊತ್ತ ರೂ. 780.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಹೀಗಾಗಿ ಭೂಸ್ವಾಧೀನ ಹಾಗೂ ಪುರ್ನವಸತಿ ಕಾಮಗಾರಿಗಳಿಗಾಗಿ ಸಂಪೂರ್ಣ ಮೊತ್ತ ರೂ.10.80 ಕೋಟಿಗಳು ಬಿಡುಗಡೆಯಾಗಿರುತ್ತದೆ. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರು ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ 12.12.06ರ ಪತ್ರದಲ್ಲಿ ಸಲ್ಲಿಸಿದ ಉಪಯೋಗಿತ ಪ್ರಮಾಣ ಪತ್ರದಲ್ಲಿ ಮಂಗಳೂರು ವಿಮಾನ ನಿಲ್ದಾಣ ಅಭಿವೃದ್ಧಿಗಾಗಿ ಬಿಡುಗಡೆಯಾಗಿರುವ ಒಟ್ಟು ಮೊತ್ತ ರೂ.10.80 ಕೋಟಿಗಳ ಪೈಕಿ ರೂ.991.34ಲಕ್ಷಗಳು ಬಳಕೆಯಾಗಿ ರೂ.88.659ಲಕ್ಷಗಳು ಬಾಕಿ ಉಳಿದಿರುತ್ತದೆ ಎಂದು ವರದಿ ಮಾಡಿರುತ್ತಾರೆ.

2. ಮೇಲೆ ಓದಲಾದ ಕ್ರಮ ಸಂ. (5)ರಲ್ಲಿ ದಿನಾಂಕ 3.7.09ರಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು ಮಂಗಳೂರು ವಿಮಾನ ನಿಲ್ದಾಣದ ಭೂಸ್ವಾಧೀನತೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಪುನರ್ವಸತಿ ಕಾಲೋನಿಯಲ್ಲಿ ಕುಡಿಯುವ ನೀರಿನ ಸರಬರಾಜು ವ್ಯವಸ್ಥೆಗೆ ಅಂದಾಜು ವೆಚ್ಚ ರೂ.10.10ಲಕ್ಷಗಳ ಬಿಡುಗಡೆಗಾಗಿ ಪ್ರಸ್ತಾವನೆ ಸಲ್ಲಿಸಿದ್ದು, ಈ ಪ್ರಸ್ತಾವನೆಯನ್ನು ಪರಿಗಣಿಸಿ ಕ್ರಮ ಸಂ. (6) ರ ಸರ್ಕಾರಿ ಆದೇಶ ದಿನಾಂಕ:3.8.09ರಲ್ಲಿ ರೂ.10.10ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

3. ಮೇಲೆ ಕ್ರಮ ಸಂ.(7)ರಲ್ಲಿ ಓದಲಾದ ದಿನಾಂಕ:28.10.09ರಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು, ಮಂಗಳೂರು ವಿಮಾನ ನಿಲ್ದಾಣದ ಭೂಸ್ವಾಧೀನತೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಅಭಿವೃದ್ಧಿ ಪಡಿಸುತ್ತಿರುವ 2 ಪುನರ್ ವಸತಿ ಕಾಲೋನಿಗಳಲ್ಲಿ ರಸ್ತೆ, ಬೀದಿ ದೀಪಗಳು, ಸಮುದಾಯ ಭವನ, ಕುಡಿಯುವ ನೀರಿನ ವ್ಯವಸ್ಥೆ ಇತ್ಯಾದಿಗಳ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ.31,00,000/-ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಮಧ್ಯೆ ಮೇಲೆ ಉಲ್ಲೇಖ (8) ರಲ್ಲಿ ಓದಲಾದ ಪತ್ರ ದಿನಾಂಕ:4.11.09ರಲ್ಲಿ ಜಿಲ್ಲಾಧಿಕಾರಿಗಳು ಪರಿಷ್ಕೃತ ಪ್ರಸ್ತಾವನೆ ಸಲ್ಲಿಸಿ ಭೂಮಿ ಸಮತಟ್ಟು ಮಾಡಲು ಹಾಗೂ ಕಾಂಪೌಂಡ್ ಗೋಡೆ ನಿರ್ಮಾಣವನ್ನು ಸೇರಿಸಿ ರೂ.33,50,000/-ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದು, ಮೇಲೆ ಓದಲಾದ ಕ್ರ.ಸಂ. (9) ರ ಸರ್ಕಾರಿ ಆದೇಶ ದಿನಾಂಕ : 10.11.2009ರಲ್ಲಿ ರೂ. 33.50 ಲಕ್ಷಗಳನ್ನು ಬಿಡುಗಡೆ ಮಾಡಿ ಇನ್ನು ಮುಂದೆ ಈ ಪುನರ್ವಸತಿ ಕಾಲೋನಿಗಳ ನಿರ್ವಹಣೆಯ ಜವಾಬ್ದಾರಿಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್/ತಾಲ್ಲೂಕು ಪಂಚಾಯತ್‌ನಿಂದ ನಿರ್ವಹಿಸುವುದೆಂದು ತಿಳಿಸಲಾಗಿರುತ್ತದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (10) ರಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರು ವರದಿ ಮಾಡಿ ಮಂಗಳೂರು ವಿಮಾನ ನಿಲ್ದಾಣದ ವಿಸ್ತರಣೆಗಾಗಿ 2ನೇ ಹಂತದಲ್ಲಿ ಹೆಚ್ಚುವರಿ ಭೂಸ್ವಾಧೀನತೆಯಿಂದ ನಿರ್ವಸಿತರಾದವರಿಗೆ ನಿರ್ಮಿಸಲಾದ ಮಳವೂರು ಪುನರ್ವಸತಿ ಕಾಲೋನಿಯಲ್ಲಿ ಬಾಕಿ ಉಳಿದಿರುವ ಅಭಿವೃದ್ಧಿ ಕಾಮಗಾರಿಗಳಿಗೆ ರೂ. 38.49 ಲಕ್ಷಗಳನ್ನು ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (11) ರಲ್ಲಿ ಕೊಳಂಬೆ ಪುನರ್ವಸತಿ ಕಾಲೋನಿಯಲ್ಲಿ ಬಾಕಿ ಉಳಿದಿರುವ ಅಭಿವೃದ್ಧಿ ಕಾಮಗಾರಿಗಳಿಗೆ ರೂ. 29.05 ಲಕ್ಷ ಒಟ್ಟು 67.54 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಸರ್ಕಾರದ ಆದೇಶ ಸಂಖ್ಯೆ:ಮೂಅಇ 2 ರಾಅವಿ 2008, ಬೆಂಗಳೂರು, ದಿನಾಂಕ : 28.01.2014**

1. ಸರ್ಕಾರ ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಮಂಗಳೂರು ವಿಮಾನ ನಿಲ್ದಾಣದ ವಿಸ್ತರಣೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಮಳವೂರು ಮತ್ತು ಕೊಳಂಬೆ ಪುನರ್ವಸತಿ ಕಾಲೋನಿಗಳಲ್ಲಿ ಕಾಮಗಾರಿಗಳಿಗೆ ಬೇಕಾಗಿರುವ ಹೆಚ್ಚುವರಿ ಅನುದಾನ ರೂ. 67.54 ಲಕ್ಷಗಳನ್ನು (ರೂ. ಅರವತ್ತೇಳು ಲಕ್ಷದ ಐವತ್ತ ನಾಲ್ಕು ಸಾವಿರಗಳು ಮಾತ್ರ) ಬಿಡುಗಡೆ ಮಾಡಲು ಸಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಪುನರ್ವಸತಿ ಕಾಮಗಾರಿಗಳನ್ನು ತಕ್ಷಣ ಕಾರ್ಯಗತಗೊಳಿಸಿ ಬಿಡುಗಡೆ ಮಾಡಿದ ಮೊತ್ತದ ಉಪಯೋಗಿತ ಪ್ರಮಾಣ ಪತ್ರ ಸಲ್ಲಿಸುವಂತೆ ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಸೂಚಿಸಿದೆ.

3. ಮುಂದಿನ 2014–15 ನೇ ಆರ್ಥಿಕ ವರ್ಷದಿಂದ ಸದರಿ ಕಾಲೋನಿಗಳ ಸಂಬಂಧಿತ ಉಸ್ತುವಾರಿ ಕೆಲಸಗಳನ್ನು ಜಿಲ್ಲಾಧಿಕಾರಿ, ಮಂಗಳೂರು ಜಿಲ್ಲೆ ಇವರೇ ನಿರ್ವಹಿಸತಕ್ಕದ್ದು ಮತ್ತು ಭರಿಸತಕ್ಕದ್ದು.

4. ಈ ವೆಚ್ಚವನ್ನು 2013–14 ನೇ ಸಾಲಿನ ಲೆಕ್ಕ ಶೀರ್ಷಿಕೆ 5465–01–190–1–05–ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ (ಯೋಜನೆ)–211 ಬಂಡವಾಳ ಇದರಡಿಯಲ್ಲಿ ಭರಿಸತಕ್ಕದ್ದು.

5. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಜಿಲ್ಲಾ ಖಜಾನೆ ಮಂಗಳೂರು, ಇಲ್ಲಿ ಡ್ರಾ ಮಾಡಲು ಅಧೀಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ ಬೆಂಗಳೂರು ಇವರು ಈ ಮೊತ್ತವನ್ನು ಮಂಗಳೂರು ಜಿಲ್ಲಾಧಿಕಾರಿಗಳ ಖಾತೆಗೆ ಅಪಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತ ಪ್ರಮಾಣ ಪತ್ರವನ್ನು ಮಂಗಳೂರು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

6. ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2013, ದಿನಾಂಕ:10.05.2013ರಲ್ಲಿ ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಬಿನ್ ವನರಾಜ್. ಜೆ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ.),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**PR.158**

**SC.50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59